# ವರದಾ ತೀರದ ಯತಿವರೇಣ್ಯರು

**ಶ್ರೀ ಧೀರೇಂದ್ರ ತೀರ್ಥರು**



**ಶ್ರೀ ಸುಶೀಲೇಂದ್ರ ತೀರ್ಥರು**



ಸಂಪಾದಕರು : **ಧೀರಣ್ಣ ವೈದ್ಯ**

: ಪ್ರಕಾಶಕರು :

**ಗುರು ಶ್ರೀಶ ವಿಠ್ಠಲ ಪ್ರಕಾಶನ**
**ಕಂಪ್ಲಿ-ಕೋಟೆ**

# ವರದಾ ತೀರದ ಯತಿ ವರೇಣ್ಯರು

ಸಂಪಾದಕರು : ಧೀರಣ್ಣ ವೈದ್ಯ

: ಪ್ರಕಾಶಕರು :

**ಶ್ರೀ ಗುರುಶ್ರೀಶ ವಿಠ್ಠಲ ಪ್ರಕಾಶನ**

**ಕಂಪ್ಲಿ - ಕೋಟೆ**

"ವರದಾ ತೀರದ ಯತಿ ವರೇಣ್ಯರು" ; ಸಂಪಾದಕರು : ಧೀರಣ್ಣ ವೈದ್ಯ
ಪ್ರಕಾಶಕರು : ಶ್ರೀ ಗುರುಶ್ರೀಶ ವಿಠ್ಠಲ ಪ್ರಕಾಶನ, ಕಂಪ್ಲಿ-ಕೋಟೆ

ಪ್ರತಿಗಳು : 1,000

ಮೊದಲ ಮುದ್ರಣ : ಮಾರ್ಚ್, 2001



ರೂ. 25/-

ಮುದ್ರಕರು : ವಿಕ್ರಮ ಪ್ರಕಾಶನ, ಕಂಪ್ಯೂಟರೀಕೃತ ಆಫಸೆಟ್ ಮುದ್ರಕರು,
ಕೆ. ಸಿ. ರೋಡ, ಗದಗ - 582 101 ✆ : 38880



## ಅರ್ಪಣೆ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ, ಶ್ರೀ ಮನ್ಮೂಲ ರಘುಪತಿ ವೇದವ್ಯಾಸ ದೇವ ದಿವ್ಯ ಶ್ರೀಪಾದ ಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮುಖ್ಯ ಮಹಾ ಸಂಸ್ಥಾನಾಧೀಶ್ವರ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮ ಮಠೀಯ ವೇದಾಂತ ಸಾಮ್ರಾಜ್ಯ ವಿದ್ಯಾಸಿಂಹಾಸನಾಧೀಶ್ವರ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದ ಕರಕಮಲ ಸಂಜಾತ ಶ್ರೀಮತ್ಸುಜಯೀಂದ್ರ ತೀರ್ಥ ಶ್ರೀಪಾದ ವರಕುಮಾರಕರಾದ

ಶ್ರೀ ೧೦೦೮ ಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದಂಗಳವರ
ಅನುಗ್ರಹದಿಂದ ರಚಿತವಾದ ಈ ಕೃತಿ
ಅವರ ಪಾದಪದ್ಮಗಳಲ್ಲಿ
ಭಕ್ತಿ, ಶ್ರದ್ಧಾದರಪೂರ್ವಕವಾಗಿ ಸಮರ್ಪಣೆ

ಶ್ರೀಪಾದರ ಚರಣ ಸೇವಕ,
ಧೀರಣ್ಣ ವೈದ್ಯ

# ಪರಿವಿಡಿ

***

# ಮುನ್ನುಡಿ

ಸಕಲ ವಿದ್ಯೆ, ಧರ್ಮ, ಸದಾಚಾರ, ಶೀಲ, ಸಂಸ್ಕೃತಿಗಳಿಗೆ ವಿಖ್ಯಾತವಾದದ್ದು ಗೌತಮ ಗೋತ್ರದ ಷಾಷ್ಟಿಕ ವಂಶದ ಬೀಗಮುದ್ರೆ ಮನೆತನ. ಈ ಸದ್ವಂಶದಲ್ಲಿ ಅನೇಕ ಜ್ಞಾನಿಗಳು ಆಗಿ ಹೋಗಿ ಇಂದಿಗೂ ಸತ್ಕೀರ್ತಿಯಿಂದ ಬೆಳಗುತ್ತಿದ್ದಾರೆ. ಈ ಪರಂಪರೆಯಲ್ಲಿ ಇಂದು ಲೋಕವಂದ್ಯರಾಗಿ ಕಾಮಧೇನು ಕಲ್ಪತರುಗಳೆಂದು ವಿಖ್ಯಾತರಾಗಿ ಸರ್ವರಿಂದ ಮಾನ್ಯರಾದ ಜಗದ್ಗುರು ಶ್ರೀ ರಾಘವೇಂದ್ರ ಸ್ವಾಮಿಗಳವರು ಅತಿ ಪ್ರಮುಖರು. ಇವರು ಶ್ರೀ ಹಂಸ ನಾಮಕ ಪರಮಾತ್ಮನ ತತ್ಪರಂಪರೆಯಲ್ಲಿ ಬಂದು ದ್ವೈತ ಸಿದ್ಧಾಂತ ಸ್ಥಾಪಕರಾದ ಶ್ರೀ ಪಾವನ ಪವಮಾನಾವತಾರಿಗಳಾದ ಶ್ರೀ ಮಧ್ವಾಚಾರ್ಯರ ವೇದಾಂತ ಸಾಮ್ರಾಜ್ಯ ಚಕ್ರವರ್ತಿಗಳು. ಈ ಮಹಾಪೀಠದಲ್ಲಿ ಷಾಷ್ಟಿಕ ಮನೆತನದ ಅನೇಕ ಜ್ಞಾನಿಗಳು ವಿರಾಜಿಸಿ ಲೋಕ ಕಲ್ಯಾಣವಾಗಿ ಸರ್ವಮಾನ್ಯರಾಗಿ ಕೀರ್ತಿ ಗಳಿಸಿದ್ದಾರೆ.

ವರದಾ ನದೀ ತೀರದ ಶ್ರೀ ರಿತ್ತಿ ಕ್ಷೇತ್ರವು ಮಹಾಪುಣ್ಯಸ್ಥಲವಾಗಿದೆ. ಈ ಕ್ಷೇತ್ರದಲ್ಲಿ ಈರ್ವರು ಮಹಾನುಭಾವರು ರಾಜಿಸಿ ಭಕ್ತವೃಂದವನ್ನು ಪೊರೆಯುತ್ತಿದ್ದಾರೆ. ಇವರಲ್ಲಿ ಮೊದಲನೆಯವರು ಶ್ರೀ ರಾಘವೇಂದ್ರ ಸ್ವಾಮಿಗಳ ಪೂರ್ವಾಶ್ರಮದಲ್ಲಿ ಶ್ರೀ ರಾಯರಿಂದ ನಾಲ್ಕನೆಯವರೂ, ಶ್ರೀ ಗುರು ರಾಜರ ಪೀಠದಲ್ಲಿ ಎಂಟನೆಯವರಾದ ಶ್ರೀ ಧೀರೇಂದ್ರ ತೀರ್ಥ ಶ್ರೀಪಾದಂಗಳವರು ಅತಿ ವಿಖ್ಯಾತರು. ಇವರು ಜ್ಞಾನ, ವೈರಾಗ್ಯ, ಭಕ್ತಿಗಳ ತ್ರಿವೇಣಿ ಸಂಗಮದಂತಿರುವ ತಪಸ್ವಿಗಳು. ಸಕಲ ವಿದ್ಯಾ ವಿಶಾರದರು, ದ್ವೈತ ಸಿದ್ಧಾಂತ ಸ್ಥಾಪಕರು ಮತ್ತು ವೇದ, ಉಪನಿಷತ್, ಸೂಕ್ತ, ವೇದಾಂತ ಶಾಸ್ತ್ರಗಳಲ್ಲಿ ಪಾರಂಗತರು, ಗ್ರಂಥಕರ್ತರು, ಭಕ್ತವತ್ಸಲರು, ಇಷ್ಟಾರ್ಥ ಪ್ರದರು. ಇವರು ವಿಖ್ಯಾತರಾದ ಶ್ರೀ ವಾದೀಂದ್ರ ತೀರ್ಥರ ಪೂರ್ವಾಶ್ರಮ ಪುತ್ರರು – ಹೆಸರು ಶ್ರೀ ಜಯರಾಮಾಚಾರ್ಯರು. ಸಕಲ ಶಾಸ್ತ್ರ ವಿಶಾರದರಾದ ಇವರು ಶ್ರೀ ಮಹಾಚಾರ್ಯ ಪೀಠಾಧೀಶರಾದ ಶ್ರೀ ವಸುಧೇಂದ್ರ ತೀರ್ಥರಿಂದ ಮಂತ್ರ ಮುದ್ರ ಧಾರಣ ಮತ್ತು ಗುರೂಪದೇಶ ಪಡೆದು, ಶ್ರೀ ವರದೇಂದ್ರರಿಂದ ಸರ್ವಜ್ಞ ಪೀಠದಲ್ಲಿ "ಶ್ರೀ ಧೀರೇಂದ್ರ ತೀರ್ಥರೆಂದು ಪಟ್ಟಾಭಿಷಿಕ್ತರಾಗಿ ಲೋಕವಿಖ್ಯಾತರಾದವರು. ರಿತ್ತಿ ಕ್ಷೇತ್ರದಲ್ಲಿ ಈ ಮಹನೀಯರ ಪಕ್ಕದಲ್ಲಿ ರಾಜಿಸಿರುವ ಶ್ರೀ ಸುಶೀಲೇಂದ್ರ ತೀರ್ಥರು.

ಶ್ರೀ ಸುಶೀಲೇಂದ್ರ ತೀರ್ಥರು ಶ್ರೀ ಮಧ್ವಾಚಾರ್ಯರ ಮಹಾಪೀಠದಲ್ಲಿ ಶ್ರೀ ರಾಯರ ತರುವಾಯ ಹದಿನೇಳನೆಯವರು ಮತ್ತು ಶ್ರೀ ರಾಯರ ವಂಶದಲ್ಲಿ ನಾಲ್ಕನೆಯವರು. ಮೇಲ್ಕಂಡ ಜ್ಞಾನಿಗಳಿಬ್ಬರು ಪೀಠ ಮತ್ತು ಪೂರ್ವಾಶ್ರಮ ವಂಶದಲ್ಲಿ ವಿರಾಜಿಸಿದವರಾದ್ದರಿಂದ ಇವರುಗಳನ್ನು ಜ್ಞಾನಿಗಳು "ಶ್ರೀ ಗುರುರಾಜರ ಉಭಯ ವಂಶಾಬ್ಧಿ ಚಂದ್ರಮ"ರೆಂದು ಸ್ತುತಿಸುವರು.

ಈ ಮಹನೀಯರಿಬ್ಬರ ಪಾವನ ಚರಿತ್ರೆ ಲೋಕೋಪಕಾರ ಭಕ್ತ ವಾತ್ಸಲ್ಯಾದಿಗಳನ್ನು ಗುರು ಭಕ್ತರಿಗೆ ಮನದಟ್ಟು ಮಾಡಿಕೊಡಲು ವಿದ್ಯಾವಂತರೂ, ಕವಿ, ಸಾಹಿತಿಗಳೂ, ಶ್ರೀ ಮಠದ ಶಿಷ್ಯರು, ಗುರುಗಳ ಪರಮ ಭಕ್ತರೂ ಆದ ಕಂಪ್ಲಿಯ ಶ್ರೀ ಧೀರಣ್ಣ ವೈದ್ಯ ಇವರು ಗುರು ಚರಿತೆಯ ಸಾರವನ್ನು ಅವರ ಮೇಲಿನ ಸ್ತೋತ್ರಾದಿಗಳನ್ನು "ವರದಾ ತೀರದ ಯತಿ ವರೇಣ್ಯರು" ಎಂಬ ಗ್ರಂಥ ಬರೆದು ಮಹೋಪಕಾರ ಮಾಡಿದ್ದಾರೆ. ಶ್ರೀ ಗುರುವರ್ಯದ್ವಯರ ಚರಿತೆ ಮಹಿಮಾದಿಗಳನ್ನು ತಿಳಿಯಲು ಈ ಗ್ರಂಥವು ಬಹಳ ಉಪಕಾರಕವಾಗಿದೆ. ಇಂಥ ಸತ್ಕಾರ್ಯ ಮಾಡಿರುವ ಶ್ರೀ ಧೀರಣ್ಣ ವೈದ್ಯರು ಶ್ಲಾಘನೀಯರು. ಗುರುಭಕ್ತರು ಈ ಗ್ರಂಥ ಸಂಗ್ರಹಿಸಿ ಗುರು ಮಹಿಮೆಯರಿತು ಭಕ್ತಿಪೂರ್ವಕ ಸೇವಿಸಿ ಶ್ರೀ ಗುರುದ್ವಯರ ಅನುಗ್ರಹಕ್ಕೆ ಪಾತ್ರರಾಗಬೇಕು.

ಇಂಥ ಕೃತಿ ರಚನೆಯಿಂದ ಉಪಕರಿಸಿರುವ ಶ್ರೀ ಧೀರಣ್ಣ ವೈದ್ಯರಿಗೆ ಶ್ರೀ ಹರಿವಾಯು ಗುರುರಾಜರು ಶ್ರೀ ಧೀರೇಂದ್ರ – ಶ್ರೀ ಸುಶೀಲೇಂದ್ರರು ಆಯುರಾರೋಗ್ಯ, ಐಶ್ವರ್ಯ, ಸನ್ಮಂಗಳಗಳನ್ನು ಕರುಣಿಸಲೆಂದು ಪ್ರಾರ್ಥಿಸಿ ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇನೆ.

ಬೆಂಗಳೂರು
ಶಿವರಾತ್ರಿ
ತಾ: 20-2-2001

ಇತಿ ಶ್ರೀ ಗುರುಪಾದ ಕಿಂಕರ,
ಶ್ರೀ ರಾಘವೇಂದ್ರ ಗುರು ವಂಶಭೂಷಣ,
ರಾಜಾ, ಶ್ರೀ ಗುರುರಾಜಾಚಾರ್ಯ

॥ ಶ್ರೀ ಪಟ್ಟಾಭಿರಾಮಚಂದ್ರ ಪ್ರಸನ್ನ ॥

# ಬಿನ್ನಹ

ಶ್ರೀ ಹರಿವಾಯು ಗುರುಗಳ ಪ್ರೇರಣಾನುಸಾರವಾಗಿ ಪರಮ ಪಾವನ ವರದಾ ತೀರದ ರಿತ್ತಿ ಕ್ಷೇತ್ರ ಯತಿವರೇಣ್ಯರಾದ ಶ್ರೀ ಧೀರೇಂದ್ರ ತೀರ್ಥರು ಹಾಗೂ ಶ್ರೀ ಸುಶೀಲೇಂದ್ರ ತೀರ್ಥರ ಈ ಕೃತಿಯ ಬಿಡುಗಡೆ.

ವರದಾ ನದಿ ಹಾಗೂ ರಿತ್ತಿ ಕ್ಷೇತ್ರಗಳು ಪುರಾಣ ಪ್ರಸಿದ್ಧ ಸ್ಥಳಗಳು.

*ಸ್ಮರದಾಶ್ರಿತ ದುಷ್ಕರ್ಮ ಗುರುದಾಹ ವಿದಾರಿಣೀಮ್ ।*
*ವರದಾಂ ಹರಿದಾಸೇಷ್ಟ ವರದಾ ನರ ತಾಂ ಭಜೇ ॥*

ಎಂಬುದಾಗಿ ಶ್ರೀ ವಾದಿರಾಜ ತೀರ್ಥರು ತಮ್ಮ ತೀರ್ಥ ಪ್ರಬಂಧದಲ್ಲಿ ಸಾರಿದಂತೆ, ತನ್ನನ್ನು ಸ್ಮರಿಸುವ ಭಕ್ತರ ದುಷ್ಕರ್ಮ ದಾಹ ಪರಿಹರಿಸಿ, ಹರಿದಾಸರಿಷ್ಟಾರ್ಥ ಸಲ್ಲಿಸುವುದರಲ್ಲಿ ನಿರತರು ಎಂದು ಸಾರಿದರೆ, "ವರವ ಕೊಡು ಎನಗೆ ಸುಜನರು ಮೆಚ್ಚುವಂದದಲಿ" ಎಂದು ಶ್ರೀ ವಿಜಯದಾಸರು ಸಾರಿದ್ದಾರೆ. "ಜಗನ್ನಾಥ ವಿಠ್ಠಲವೊಂದರ ಘಳಿಗೆ ಬಿಡದೆ ಪೊಂದಿರಲಿ ಮನ್ಮನದಿ" ಎಂದು ಶ್ರೀ ಜಗನ್ನಾಥ ದಾಸಾರ್ಯರು ಕೊಂಡಾಡಿದಂಥ ವರದೆಯ ಮಹಿಮಾ ಕ್ಷೇತ್ರ ರಿತ್ತಿ ಎನಿಸಿರಬೇಕು. ಪರಮಾತ್ಮನಲ್ಲಿ "ರತಿ"ಯನ್ನು ಕೊಡುವುದರಿಂದಲೇ ರಿತ್ತಿ ಎನಿಸಿರಬೇಕು. ಆದಕ್ಕೆಂದೇ ಯತಿಗಳ ತಾಣವಾಗಿದೆ.

ಕಾರಣ ಶ್ರೀ ಜಗನ್ನಾಥ ದಾಸಾರ್ಯರು ಸ್ತುತಿಸಿದಂತೆ

ಸ್ಮರಿಸು ಗುರು ಸಂತತಿ ಸರ್ವಕಾಲಗಳಲ್ಲಿ ।
ಪೊರೆವ ಹರಿ ಚತುರ ವಿಧ ಪುರುಷಾರ್ಥಗಳನಿತ್ತು ॥

ಎಂದು ಸಾರಿದ್ದರೆ,

ಪ್ರಾಣೇಶ ವಿಠ್ಠಲನ ಕಾಣಬೇಕಾದರೆ ।
ಈ ನಮ್ಮ ಗುರುಗಳ ಧ್ಯಾನ ದೊಳಿಹದೂ ॥

ಎಂಬ ಬಿಂಬದರ್ಶನ ಗುರುಗಳ ಧ್ಯಾನ ಅನುಗ್ರಹ ಮುಖ್ಯವೆಂದು ಸಾರಿದ್ದೇ ಈ ಕೃತಿ ಹೊರಬರಲು ಕಾರಣವಾಯಿತು.

ಈ ಕೃತಿಗೆ ಕನಕ ಕವಚ ಹೊದಿಸಿದಂತೆ ಆಶೀರ್ವಾದದ ಮುನ್ನುಡಿ ಬರೆದುಕೊಟ್ಟು, ಸಲಹೆ, ಸೂಚನೆಗಳನ್ನು ನೀಡಿ ಉಪಕಾರ ಮಾಡಿದ ಶ್ರೀ ರಾಘವೇಂದ್ರ ಗುರುವಂಶಭೂಷಣರಾದ ಶ್ರೀ ರಾಜಾ ಗುರುರಾಜಾಚಾರ್ಯರವರಿಗೆ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಕೃತಿಯ ಗ್ರಂಥ ಋಣದಲ್ಲಿ ತಿಳಿಸಿದಂತೆ, ಈ ಕೃತಿಗೆ ಕಾರಣವಾದ ಕೃತಿಗಳನ್ನು ಸ್ಮರಿಸುವದು ನಮ್ಮ ಆದ್ಯ ಕರ್ತವ್ಯವಾಗಿದೆ. ತಮ್ಮ ಸಂಗ್ರಹದಲ್ಲಿದ್ದ ಅನೇಕ ಕೃತಿಗಳನ್ನು ಕೊಟ್ಟು, ಸಹಕರಿಸಿದ ಮಾತೋಶ್ರೀ ಶ್ರೀಮತಿ ರಾಧಾಬಾಯಿ ಕೃಷ್ಣಾಚಾರ್ ವೈದ್ಯರವರಿಗೂ ಅನಂತ ನಮಸ್ಕಾರಗಳು.

ಈ ಕೃತಿಗೆ ಅನೇಕ ವಿಷಯಗಳನ್ನಿತ್ತು ಸಹಕರಿಸಿದ ಶ್ರೀ ಗೋಪಣ್ಣ ಕುಲಕರ್ಣಿ, ಶ್ರೀ ಭೀಮರಾವ್ ಕುಲಕರ್ಣಿ ಹಾಗೂ ಶ್ರೀ ಭಾಸ್ಕರ ನಿಶಾತೆ ಇವರಿಗೂ ಸಪ್ರೇಮ ವಂದನೆಗಳನ್ನು ಅರ್ಪಿಸುತ್ತೇನೆ.

ಶ್ರೀ ಗುರುವರ್ಯರ ಕೃಪೆಯಿಂದಲೇ – ದಿ. ಶ್ರೀ ರಾಘವೇಂದ್ರರಾವ್ ಭೀಮರಾವ್ ಕುಲಕರ್ಣಿ (ಹೊಸರಿತ್ತಿ), ದಿ. ಶ್ರೀಮತಿ ಶಕುಂತಲಾಬಾಯಿ (ಗುಂಡಕ್ಕ) ರಾಘವೇಂದ್ರರಾವ್ ಕುಲಕರ್ಣಿ (ಹೊಸರಿತ್ತಿ) ಹಾಗೂ ದಿ. ಶ್ರೀ ಕೃಷ್ಣಾಚಾರ್ ಸ್ವಾಮಿರಾಯಾಚಾರ್ ವೈದ್ಯ (ಕಂಪ್ಲಿ) ಇವರ ಸ್ಮರಣಾರ್ಥ ಪ್ರಕಟಿಸಲು ಮುಂದಾದ ದಾನಿಗಳಿಗೂ, ಲಾಲಿಸಿದ ಆತ್ಮೀಯರಿಗೂ, ಪುಸ್ತಕ ಮುದ್ರಿಸಿಕೊಟ್ಟ ಗದುಗಿನ ವಿಶ್ರಮ ಪ್ರಕಾಶನದವರಿಗೂ, ಶ್ರೀಯುತ ಹರಿದಾಸರವರಿಗೂ, ಶ್ರೀ ಗುರುಗಳಂತರ್ಗತನಾದ ಶ್ರೀಮನ್ಮೂಲ ರಾಮಚಂದ್ರನು ಸರ್ವರಿಗೂ ಜ್ಞಾನ, ಭಕ್ತಿ, ವೈರಾಗ್ಯ ಹಾಗೂ ಉತ್ತರೋತ್ತರ ಅಭಿವೃದ್ಧಿ ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ಕಂಪ್ಲಿ, ದಾಸ ಬಂಧು,
25-02-2001 ಧೀರಣ್ಣ ವೈದ್ಯ

## ಶ್ರೀ ಧೀರೇಂದ್ರತೀರ್ಥರ ಗುರುಗಳಾದ
## ಶ್ರೀ ವರದೇಂದ್ರತೀರ್ಥರು, ಪೂನಾ



ವಾದೇ ವಿಜಯ ಶೀಲಾಯ ವರದಾಯ ವರಾರ್ಥಿನಾಂ ।
ವದಾನ್ಯ ಜನ ಸಿಂಹಾಯ ವರದೇಂದ್ರಾಯ ತೇ ನಮಃ ॥

## ಶ್ರೀ ಧೀರೇಂದ್ರತೀರ್ಥರು, ಹೊಸರಿತ್ತಿ



ಧರಣೀಮಂಡಲೇ ಖ್ಯಾತಂ ಧೈರ್ಯಾದಿ ಗುಣ ಬೃಂಹಿತಂ ।
ಧಿ ಕೃತಾಶೇಷವಾದೀಭಂ ಧೀರಸಿಂಹ ಗುರುಂ ಭಜೇ ॥

# ರಿತ್ತಿಯ ಯತಿವರೇಣ್ಯ ಶ್ರೀ ಧೀರೇಂದ್ರತೀರ್ಥರು

ಆಪಾದ ಮೌಳಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್
ತೇನ್ ವಿಘ್ನಾಃ ಪ್ರಣಶ್ಯಂತಿ ಸಿದ್ಧಿಂತಿ ಚ ಮನೋರಥಾ ॥

ಶ್ರೀ ಮದಾನಂದತೀರ್ಥರ ಪರಂಪರೆಯಲ್ಲಿ ಶ್ರೀ ಪದ್ಮನಾಭ ತೀರ್ಥರಿಂದ ಮೊದಲ್ಗೊಂಡು ಶ್ರೀ ನರಹರಿ ತೀರ್ಥರು, ಶ್ರೀ ಮಾಧವ ತೀರ್ಥರು, ಶ್ರೀ ಅಕ್ಷೋಭ್ಯ ತೀರ್ಥರು, ಶ್ರೀ ಜಯತೀರ್ಥರು, ಶ್ರೀ ವಿದ್ಯಾಧಿರಾಜ ತೀರ್ಥರು, ಶ್ರೀ ಕವೀಂದ್ರ ತೀರ್ಥರು, ಶ್ರೀ ವಾಗೀಶ ತೀರ್ಥರು, ಶ್ರೀರಾಮಚಂದ್ರ ತೀರ್ಥರು, ಶ್ರೀ ವಿಭುದೇಂದ್ರ ತೀರ್ಥರು, ಶ್ರೀ ಜಿತಾಮಿತ್ರ ತೀರ್ಥರು, ಶ್ರೀ ರಘುನಂದನ ತೀರ್ಥರು, ಶ್ರೀ ಸುರೇಂದ್ರ ತೀರ್ಥರು, ಶ್ರೀ ವಿಜಯೀಂದ್ರ ತೀರ್ಥರಾದಿ ಶ್ರೀ ಸುಧೀಂದ್ರ ತೀರ್ಥರವರೆಗೆ ಬೆಳೆದು ಶ್ರೀ ಮಧ್ವರ ತತ್ವ ಪ್ರತಿಷ್ಠಾನದೊಂದಿಗೆ ಹರಿಯ ಮತವೇ ಹನುಮನ ಮತವೆಂದು ಸಾರಿ ದಿಗ್ವಿಜಯ ಗಳಿಸಿದರು.

ಶ್ರೀ ಸುಧೀಂದ್ರ ತೀರ್ಥರ ಕರಸಂಜಾತರೇ ಶ್ರೀ ಪ್ರಹ್ಲಾದಾಂಶರಾದ ಶ್ರೀ ರಾಘವೇಂದ್ರ ತೀರ್ಥರು. ತಪಸ್ವಿಗಳೂ, ಯೋಗಿವರೇಣ್ಯರೂ, ಪರಮಭಕ್ತರೂ, ಜ್ಞಾನಿ ಶ್ರೇಷ್ಠರೆನಿಸಿದ ಶ್ರೀ ರಾಯರು ಶ್ರೀ ಲಕ್ಷ್ಮೀನರಸಿಂಹನನ್ನು ಸ್ತಂಭದೊಳಿಸಿದ ಮಹಾನುಭಾವರು. ಗುರುಸಾರ್ವಭೌಮರು ಅನೇಕ ಮಹಿಮೆಗಳಿಂದ ಭಜಕರ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಎನಿಸಿ ಜಗದ್ವಿಖ್ಯಾತರಾಗಿ ಭಕ್ತರಿಷ್ಟಾರ್ಥಗಳನ್ನು ಇಂದಿಗೂ ಸಲ್ಲಿಸುತ್ತ ಇದ್ದಾರೆ. ಈ ಮೂಲಪೀಠವೇ ವಿದ್ಯಾಪೀಠವಾಗಿ ರಾಯರ ಮಠವೆಂದು ಪ್ರಖ್ಯಾತವಾಯಿತು.

ಶ್ರೀ ರಾಘವೇಂದ್ರ ತೀರ್ಥರ ಕರಸಂಜಾತರೇ ಶ್ರೀ ಯೋಗೀಂದ್ರ ತೀರ್ಥರು. ಅವರ ನಂತರ ಈ ಮಹಾ ಸಂಸ್ಥಾನ ಪೀಠದಲ್ಲಿ ಶ್ರೀ ಸೂರೀಂದ್ರ ತೀರ್ಥರು, ಶ್ರೀ ಸುಮತೀಂದ್ರ ತೀರ್ಥರು, ಶ್ರೀ ಉಪೇಂದ್ರ ತೀರ್ಥರು, ಶ್ರೀ ವಾದೀಂದ್ರ ತೀರ್ಥರು, ಶ್ರೀ ವಸುಧೇಂದ್ರ ತೀರ್ಥರು, ಶ್ರೀ ವರದೇಂದ್ರ ತೀರ್ಥರು ಸರ್ವಜ್ಞ ಪೀಠದಲ್ಲಿ ವಿರಾಜಮಾನರಾಗಿದ್ದರು. ಶ್ರೀ ರಾಜಾಧಿರಾಜ ಗುರುಸಾರ್ವಭೌಮರ ಕೃಪಾಛತ್ರದೊಳಗೇ ಕೀರ್ತಿ ಗಳಿಸಿ ತಪೋ ನಿಷ್ಠರೆನಿಸಿದರು.

ಶ್ರೀ ವರದೇಂದ್ರ ತೀರ್ಥರ ಕರಕಮಲಸಂಜಾತರೇ ರಿತ್ತಿಯ ರಾಯರೆಂದೇ ಪ್ರಖ್ಯಾತರಾದ ಶ್ರೀ ಧೀರೇಂದ್ರ ತೀರ್ಥರು.

18ನೇ ಶತಮಾನದ ಮಧ್ಯೆ ಕಾಲವು ವ್ಯಾಸ-ದಾಸ ಸಾಹಿತ್ಯದ ಸುವರ್ಣ ಕಾಲವು. ಸಿದ್ಧಾಂತಕ್ಕೆ ನೀಡಿದ ಕೊಡುಗೆ ಅಪಾರ, ಅವಿಸ್ಮರಣೀಯವಾದದ್ದು. ಆ ಸಮಯದಲ್ಲಿ ಶ್ರೀ ಧೀರೇಂದ್ರ ತೀರ್ಥರು ಸರ್ವಜ್ಞ ಪೀಠದಲ್ಲಿ ವಿರಾಜಮಾನರಾಗಿದ್ದರು.

## ಬಾಲ್ಯ ಜೀವನ

ಶ್ರೀ ರಾಘವೇಂದ್ರ ತೀರ್ಥರ ಪೂರ್ವಾಶ್ರಮದ ಪುತ್ರರು – ಶ್ರೀ ಲಕ್ಷ್ಮೀನಾರಾಯಣಾಚಾರ್ಯರು. ಅವರ ಪುತ್ರರು ಶ್ರೀ ಪುರುಷೋತ್ತಮಾಚಾರ್ಯರು. ಅವರ ಸುಪುತ್ರರೇ ಶ್ರೀನಿವಾಸಾಚಾರ್ಯರು (ಶ್ರೀ ವಾದೀಂದ್ರ ತೀರ್ಥರು). ಇವರ ಪುತ್ರವರೇಣ್ಯರೇ ಶ್ರೀ ಜಯರಾಮಾಚಾರ್ಯರು. ಇವರೇ ಶ್ರೀ ಧೀರೇಂದ್ರ ತೀರ್ಥರೆನಿಸಿದರು.

ಶ್ರೀನಿವಾಸಾಚಾರ್ಯರ ತಮ್ಮಂದಿರು ಶ್ರೀ ವೇಣುಗೋಪಾಲಾಚಾರ್ಯರು. ಇವರಿಗೆ ಮೂರು ಜನ ಮಕ್ಕಳಿದ್ದರು. ಮೊದಲನೆಯವರು ಶ್ರೀ ಪುರುಷೋತ್ತಮಾಚಾರ್ಯರು (ಶ್ರೀ ವಸುಧೇಂದ್ರ ತೀರ್ಥರು), ಎರಡನೇಯವರು ಶ್ರೀ ಬಲರಾಮಾಚಾರ್ಯರು (ಶ್ರೀ ವರದೇಂದ್ರ ತೀರ್ಥರು), ಮೂರನೇಯವರು ಶ್ರೀ ಲಕ್ಷ್ಮೀನಾರಾಯಣಾಚಾರ್ಯರು (ಶ್ರೀ ಭುವನೇಂದ್ರ ತೀರ್ಥರು – ಶ್ರೀ ಧೀರೇಂದ್ರ ತೀರ್ಥರ ಕರಸಂಜಾತರು).

## ವಿದ್ಯಾಭ್ಯಾಸ

ಬಾಲ್ಯದಲ್ಲಿಯೇ ತೀಕ್ಷ್ಣಮತಿಗಳಾಗಿದ್ದ ಶ್ರೀ ಜಯರಾಮಾಚಾರ್ಯರು ತಂದೆ ಶ್ರೀನಿವಾಸಾಚಾರ್ಯರಿಂದ ನ್ಯಾಯ, ವ್ಯಾಕರಣ ಹಾಗೂ ವೇದಾಂತಗಳನ್ನು ಆಳವಾಗಿ ಅಭ್ಯಾಸ ಮಾಡಿದರು.

ಇವರ ಅತಿ ನಿಶಿತವಾದ ಶಾಸ್ತ್ರ ಪಾಂಡಿತ್ಯ, ತೀಕ್ಷ್ಣವಾದ ಪ್ರತಿಭಾಸಂಪತ್ತು, ವಾದಿ ನಿಗ್ರಹ ಚಾತುರ್ಯ, ಗ್ರಂಥ ರಚನಾ ಕೌಶಲ, ಧೈರ್ಯ, ಸ್ಥೈರ್ಯಾದಿ ಸದ್ಗುಣಗಳಿಂದ ಭೂಷಿತರಾಗಿದ್ದರು.

*ಶ್ರುತಿ ಪುರಾಣ ಸಮೂಹದೊಳು ಭಾ ।*
*ರತ ಪ್ರತಿಪ್ರತಿ ಪದಗಳೊಳು ನಿ –*
*ರ್ಜಿತತ ಗುಣರೂಪಗಳ ಹುಡುಕುತ ಪರಮ ಹರುಷದಲಿ ।*

*ಮತಿಯುತರು ಪ್ರತಿ ದಿವಸ ಸಾರ ।*
*ಸ್ವತ ಸಮುದ್ರದಿ ಶಫರಿಯಂದದಿ*
*ಸಂತತ ಸಂಚರಿಸುವರು ಕಾಣುವ ಲವಲವಿಕೆಯಿಂದ ॥*

ಎಂಬ ದಾಸಾರ್ಯರ ಉಕ್ತಿಯಂತೆ ಕೋವಿದರು ಸಾರಸ್ವತ ಸಮುದ್ರದಿ ಪರಮಾತ್ಮನ ಹುಡುಕುವಂತೆ ಶ್ರೀ ಜಯರಾಮಾಚಾರ್ಯರು ಶಾಸ್ತ್ರಾಧ್ಯಯನದಲ್ಲಿಯೇ ತಲ್ಲೀನರಾಗಿದ್ದರು.

## ಗೃಹಸ್ಥಾಶ್ರಮ

ಹಿರಿಯರಾಜ್ಞೆಯಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು. ಗೃಹಸ್ಥಾಶ್ರಮಿಯೇ ಧನ್ಯವೆಂಬಂತೆ ಅರಿತು ಸಂಸಾರದಲ್ಲಿದ್ದರು, ಜಲದಲ್ಲಿಯ ಪದ್ಮಪತ್ರದಂತೆ ಬಾಳುತಿದ್ದರು. ಇವರಿಗೆ ಮೂವರು ಪುತ್ರರಿದ್ದರು ಹಾಗೂ ಒಬ್ಬ ಪುತ್ರಿಯಿದ್ದಳು.

ಹಗಲ ನಂದಾ ದೀಪದಂದದಿ ।
ನಿಗಮ ವೇದ್ಯನ ಪೂಜಿಸುತ ಕೈ
ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೇ ।

ಜಗದುದರ ಕೊಟ್ಟಿದನು ಭುಂಜಿಸು
ಮಗ ಮಡದಿ ಪ್ರಾಣೇಂದ್ರಿಯಾತ್ಮಾ
ದಿಗಳು ಭಗವದಧೀನ ವೆಂದಡಿಗಡಿಗೆ ನೆನೆವುತಿರು ॥

ಎಂಬ ದಾಸಾರ್ಯರ ಶ್ರೀ ಹರಿಕಥಾಮೃತ ವಾಣಿ ಅವರ ಜೀವನ ಸಾರವೆನಿಸಿದಂತಿತ್ತು.

ಸಂಸ್ಥಾನಪೀಠದಲ್ಲಿ ವಿರಾಜಮಾನರಾಗಿದ್ದ ಶ್ರೀವಾದೀಂದ್ರರ ದೇಹಾಲಸ್ಯವಾಗಲು, ಅವರ ಸಂಸ್ಥಾನಪೀಠವನ್ನು ಪೂರ್ವಾಶ್ರಮ ತಮ್ಮನ ಮಗನಾದ ಶ್ರೀ ಪುರುಷೋತ್ತಮ ಆಚಾರ್ಯರಿಗೆ ಆಶ್ರಮವಿತ್ತು ಶ್ರೀ ವಸುದೇಂದ್ರ ತೀರ್ಥರೆಂದು ನಾಮಕರಣ ಮಾಡಿ, ಮಂತ್ರಾಲಯದಲ್ಲಿ 1750ನೇ ಪ್ರಮೋದನಿ ಸಂವತ್ಸರದ ಜೇಷ್ಠ ಶುದ್ಧನವಮೀ ದಿನ ಬೃಂದಾವನಸ್ಥರಾದರು. ನಂತರ 12 ವರ್ಷಗಳ ಕಾಲ ಸರ್ವಜ್ಞ ಪೀಠದಲ್ಲಿ ವಿರಾಜಮಾನರಾಗಿ (ಶ್ರೀ ವಸುದೇಂದ್ರ ತೀರ್ಥರು) ಮಠದ ಸಂಸ್ಥಾನವನ್ನು ತಮ್ಮ ಪೂರ್ವಾಶ್ರಮದ ತಮ್ಮನಾದ ಶ್ರೀ ಬಲರಾಮಾಚಾರ್ಯರಿಗೆ ಆಶ್ರಮವಿತ್ತ (ಶ್ರೀ ವರದೇಂದ್ರ ತೀರ್ಥರೆಂದು ನಾಮಕರಣ ಮಾಡಿ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಕೆಂಚನಗುಡ್ಡದಲ್ಲಿ 1761 ಅಶ್ವಯುಜ ಕೃಷ್ಣಪಕ್ಷ ಸಪ್ತಮಿ ದಿನದಂದು ಬೃಂದಾವನಸ್ಥರಾದರು.

ಜಯರಾಮಾಚಾರ್ಯರು ಕೆಲಕಾಲ ಸಂಸಾರ ಸುಖದಲ್ಲಿ ತಲ್ಲೀನರಾಗಿ, ಅದರ ಅಸಾರತೆಯನ್ನು ಅರಿತು ಮನಸ್ಸು ವೈರಾಗ್ಯದ ಕಡೆಗೆ ತಿರುಗಿ, ತೀರ್ಥಯಾತ್ರೆ ಗೈಯುತ್ತ ಪೂನಾದ ಕಡೆಗೆ ಬಂದರು.

ಆಗ ಶ್ರೀ ವರದೇಂದ್ರ ತೀರ್ಥರು ದಿಗ್ವಿಜಯ ಕೈಕೊಳ್ಳುತ್ತ ಪೂನಾಕ್ಕೆ ಆಗಮಿಸಿದ್ದರು. ಅಲ್ಲಿ ಶ್ರೀಗಳವರ ದರ್ಶನ ಅವರ ಮನಸಿಗೆ ಹರ್ಷ ತಂದಿತು. ಪೂನಾದಲ್ಲಿದ್ದ ಪೇಶ್ವೆಯವರ ಆಸ್ಥಾನದಲ್ಲಿದ್ದ ಶ್ರೀರಾಮಶಾಸ್ತ್ರಿಯವರನ್ನು ವಾದದಲ್ಲಿ ಸೋಲಿಸಿ ಶ್ರೀ ಮಧ್ವಮತದ ವಿಜಯ ಪತಾಕೆ ಹಾರಿಸಿದರು.

## ಸಂನ್ಯಾಸ ಆಶ್ರಮ

ಶ್ರೀ ಜಯರಾಮಾಚಾರ್ಯರು ತೀರ್ಥಯಾತ್ರೆ ಗೈಯುತ್ತ ಮಂತ್ರಾಲಯಕ್ಕೆ ಬಂದು ಗುರುರಾಜರ ಸೇವಿಸಿ, ನಂತರ ಕುಂಭಕೋಣದ ಶ್ರೀ ವಿಜಯೀಂದ್ರರ ಸನ್ನಿಧಿಗೆ ಧಾವಿಸಿದರು. ಕೆಲಕಾಲ ಶ್ರೀ ವಿಜಯೀಂದ್ರರ ಸೇವೆ ಗೈಯುತ್ತಿರಲು, ಶ್ರೀಗುರುಗಳು ಸ್ವಪ್ನದಲ್ಲಿ ದರ್ಶನವಿತ್ತು, ಶ್ರೀ ವರದೇಂದ್ರ ತೀರ್ಥರಲ್ಲಿ ಸಂನ್ಯಾಸ ಸ್ವೀಕಾರ ಮಾಡುವಂತೆ ಆಜ್ಞಾಪಿಸಿದರು. ಸಂತೋಷಭರಿತರಾದ ಆಚಾರ್ಯರು ಶ್ರೀ ವರದೇಂದ್ರರಿದ್ದಲ್ಲಿಗೆ ಧಾವಿಸಿ, ಸ್ವಪ್ನ ವೃತ್ತಾಂತವನ್ನು ತಿಳಿಸಿದರು.

ನಂತರದಲ್ಲಿ ಶ್ರೀ ವರದೇಂದ್ರ ತೀರ್ಥರ, ಶಾಲಿವಾಹನ ಶಕೆ 1697ನೇ ಜಯ ಸಂವತ್ಸರದಲ್ಲಿ (1775-76 A.D.) ಮಂತ್ರ ಮುದ್ರ ಧಾರಣ, ಗುರು ಉಪದೇಶಗಳನ್ನು ಮಾಡಿ ಸರ್ವಜ್ಞಪೀಠದಲ್ಲಿ ಕೂಡಿಸಿ ಶ್ರೀ ಧೀರೇಂದ್ರ ತೀರ್ಥರೆಂಬ ಅಭಿದಾನದಿಂದ ಮಹಾಸಂಸ್ಥಾನ ಸಾಮ್ರಾಜ್ಯ ಅಭಿಷೇಕ ಮಾಡಿ ಅನುಗ್ರಹಿಸಿದರು. ಕೆಲಕಾಲ ಗುರುಸೇವಾ ಮಾಡುತ್ತ, ಶ್ರೀಗಳವರೊಂದಿಗೆ ಸಂಚರಿಸಿ, ಗುರುಗಳ ಆಜ್ಞೆಯಂತೆ ಚಿಕ್ಕ ಸಂಸ್ಥಾನದ ಪ್ರತಿಮೆಗಳೊಡನೆ ದಿಗ್ವಿಜಯ ಕೈಗೊಂಡರು.

ಅತ್ತ ಶ್ರೀ ವರದೇಂದ್ರ ತೀರ್ಥರಿಗೆ ದೇಹಾಲಸ್ಯವಾಗಿ ಶ್ರೀ ಧೀರೇಂದ್ರ ತೀರ್ಥರು ಸಮೀಪದಲ್ಲಿ ಇಲ್ಲದ್ದರಿಂದ, ಶ್ರೀ ಮೂಲರಾಮನ ಪೂಜೆಗೆ ಭಂಗ ಎದಗದಂತೆ ತಮ್ಮ ಪೂರ್ವಾಶ್ರಮದ ಸಹೋದರರಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರಿಗೆ 1707 ಶಕ ಶೋಭನ ಕೃತ ಸಂ|| ಆಷಾಢ ಕೃಷ್ಣ ಪಕ್ಷ ಷಷ್ಠಿ (1784-85 AD) ಶ್ರೀ ಭುವನೇಂದ್ರ ತೀರ್ಥರೆಂದು ನಾಮಕರಣ ಮಾಡಿ ಆಶ್ರಮವಿತ್ತು, ಮಹಾಸಂಸ್ಥಾನವನ್ನು ಒಪ್ಪಿಸಿ, ಇದನ್ನು ಆಶ್ರಮಜೇಷ್ಠರಾದ ಶ್ರೀ ಧೀರೇಂದ್ರ ತೀರ್ಥರಿಗೆ ಒಪ್ಪಿಸಿ ಅವರ ಶಿಷ್ಯತ್ವವನ್ನು ವಹಿಸಬೇಕೆಂದು ತಿಳಿಸಿ, ಪೂನಾದಲ್ಲಿ ಬೃಂದಾವನಸ್ಥರಾದರು.

ಗುರುಗಳ ಆದೇಶದಂತೆ ಶ್ರೀ ಭುವನೇಂದ್ರ ತೀರ್ಥರು ಮಹಾಸಂಸ್ಥಾನವನ್ನು ಶ್ರೀ ಧೀರೇಂದ್ರ ತೀರ್ಥರಿಗೆ ಒಪ್ಪಿಸಿ, ಅವರಲ್ಲಿ ಶಿಷ್ಯತ್ವ ವಹಿಸಿದರು.

ತಪೋ ನಿಷ್ಠರಾದ ಶ್ರೀ ಧೀರೇಂದ್ರ ತೀರ್ಥರು ಜ್ಞಾನ, ಭಕ್ತಿ, ವೈರಾಗ್ಯ, ಸದ್ಗುಣಗಳಿಂದ ಆ ಪಂಡಿತ–ಪಾಮರರನ್ನು ಆಕರ್ಷಿಸಿದರು. ದಕ್ಷಿಣ ಭಾರತದಲ್ಲೆಲ್ಲ ಇವರ ಕೀರ್ತಿ ಮನೆ ಮಾತಾಗಿತ್ತು.

## ವಾಙ್ಮಯ ಸೇವಾ

ಶ್ರೀಗಳವರು ವಿದ್ವತ್‌ಪೂರ್ಣವಾದ ಅನೇಕ ಗ್ರಂಥಗಳನ್ನು ರಚಿಸಿ, ಮಧ್ವ ಪ್ರಮೇಯಗಳನ್ನು ಎತ್ತಿ ಸಾರಿದರು. ಶ್ರೀ ವಾದೀಂದ್ರ ತೀರ್ಥರಿಂದ ರಚಿತವಾದ ಶ್ರೀ ಗುರು ಗುಣಸ್ತವನಕ್ಕೆ ವ್ಯಾಖ್ಯಾನ. ಅದಲ್ಲದೇ,

1) ಗುರುಗುಣ ಸ್ತವನಕ್ಕೆ ವ್ಯಾಖ್ಯಾನ,
2) ಕಾರಕವಾದ – ಪ್ರೌಢತರ್ಕ ವಾಕ್ಯಾರ್ಥ,
3) ಶ್ರೀ ನಾರಾಯಣೋಪನಿಷತ್‌ಗೆ – ವ್ಯಾಖ್ಯಾನ,
4) ಮನ್ಯುಸೂಕ್ತಕ್ಕೆ ಶ್ರೀ ನೃಸಿಂಹಪರವಾದ ವ್ಯಾಖ್ಯಾನ,
5) ಬಳಿತ್ಥಾ ಸೂಕ್ತಕ್ಕೆ ವ್ಯಾಖ್ಯಾನ,
6) ವಾಜಸನೇಯೋಪನಿಷತ್‌ನ ವ್ಯಾಖ್ಯಾನ,
7) ಐತರೇಯೋಪನಿಷತ್‌ನ ವ್ಯಾಖ್ಯಾನ,
8) ಬ್ರಹ್ಮಸೂತ್ರ ಅಧಿಕರಣ ವಿಷಯ ವಾಕ್ಯ ಸಂಗ್ರಹ,
9) ವಿಭಕ್ತ್ಯರ್ಥ ನಿರ್ಣಯ,

10) ಶ್ರೀಮನ್ನ್ಯಾಯಸುಧೆಗೆ ವ್ಯಾಖ್ಯಾನ

11) ಶ್ರೀ ಸೂಕ್ತ ವ್ಯಾಖ್ಯಾನ

12) ಶ್ರೀ ಪುರುಷಸೂಕ್ತ ವ್ಯಾಖ್ಯಾನ,

13) ಶ್ರೀ ಅಂಬ್ರಣೆ ಸೂಕ್ತ ವ್ಯಾಖ್ಯಾನ,

14) ಶ್ರೀ ರಾಘವೇಂದ್ರ ಸ್ತೋತ್ರ ವ್ಯಾಖ್ಯಾನ.

ರಚಿಸಿ, ತತ್ವ ಜಿಜ್ಞಾಸುಗಳಿಗೆ ಮಹೋಪಕಾರವನ್ನು ಮಾಡಿರುತ್ತಾರೆ. ಇನ್ನೂ ಅನೇಕ ಗ್ರಂಥ ರತ್ನಗಳನ್ನು ರಚಿಸಿದ್ದರೂ, ಕೆಲವು ಮಾತ್ರ ಉಪಲಬ್ಧವಾಗಿವೆ.

ತಪೋಕ್ಷೇತ್ರವೆನಿಸಿದ ವರದಾ ತೀರದ ಹೊಸರಿತ್ತಿಯಲ್ಲಿ ಶ್ರೀ ಧೀರೇಂದ್ರ ತೀರ್ಥರು, ಶ್ರೀ ಭುವನೇಂದ್ರ ತೀರ್ಥರು, ಶ್ರೀ ಸತ್ಯಬೋಧ ತೀರ್ಥರು ಹಾಗೂ ಶ್ರೀ ಜಗನ್ನಾಥ ದಾಸರು ನೆಲೆಸಿದಾಗ ಹರಿಕಥಾಮೃತಸಾರದ ತತ್ವ ಪ್ರಮೇಯಗಳನ್ನು ಚರ್ಚಿಸುತ್ತಿದ್ದರು. (ಶ್ರೀ ಜಗನ್ನಾಥದಾಸರು ವಾಸಿಸುತ್ತಿದ್ದ ಮನೆ, ಹಾಗೂ ಅವರಿಗೆ ಸೇರಿದ ಜಮೀನು ಹೊಸರಿತ್ತಿಯಲ್ಲಿ ಈಗಲೂ ಇವೆ).

## ಬೃಂದಾವನ ಪ್ರವೇಶ

ವೈರಾಗ್ಯ ಶಿಖಾಮಣಿಗಳಾದ ಶ್ರೀ ಧೀರೇಂದ್ರ ತೀರ್ಥರು ಕೆಲಕಾಲ ಸಂಸ್ಥಾನ ಪೂಜೆಯನ್ನು ನಿರ್ವಹಿಸಿ, ದ್ವೈತಮತದ ಉದ್ಗ್ರಂಥಗಳ ಪಾಠವನ್ನು ಹೇಳಿ, ಸಂಪ್ರದಾಯ ಪಾಠ ಪ್ರವಚನ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಅನುಗ್ರಹಿಸಿ, ಶ್ರೀ ಭುವನೇಂದ್ರ ತೀರ್ಥರಿಗೆ ಸಂಸ್ಥಾನವನ್ನು ಒಪ್ಪಿಸಿದರು. ನಂತರ ಹೊಸರಿತ್ತಿ ಕ್ಷೇತ್ರಕ್ಕೆ ಆಗಮಿಸಿ, ತಪೋ ನಿರತರಾಗಿ, ಶ್ರೀ ಶಕ 1707 ಕ್ರೋಧಿ ಸಂವತ್ಸರ ಫಾಲ್ಗುಣ ಶುಕ್ಲ ತ್ರಯೋದಶಿ (1785-86 AD) ಯಂದು ನಾರಾಯಣ ಧ್ಯಾನರತರಾಗಿ ಅವತಾರ ಕಾರ್ಯಸಮಾಪ್ತಿಗೊಳಿಸಿ ಬೃಂದಾವನಸ್ಥರಾದರು. ಶ್ರೀಗಳವರು ಬೃಂದಾವನಸ್ಥರಾಗಿ ಏಳು ವರ್ಷಗಳಾದ ನಂತರ, ಊರಿನ ಶಾನುಭೋಗರು ಹಾಗೂ ಗೌಡರಿಗೂ ಸ್ವಪ್ನದಲ್ಲಿ ಬಂದು, ಊರ ಮಧ್ಯದಲ್ಲಿರುವ ಬೃಂದಾವನವನ್ನು ನದೀ ತೀರದಲ್ಲಿ ಪುನಃ ಪ್ರತಿಷ್ಠಾಪಿಸಬೇಕೆಂದು ಸೂಚಿಸಿದರು. ಇದರಂತೆ ನದೀ ತೀರದ ತೋಟದ ಮಾಲಿಕನಿಗೂ ಭೂಮಿಯನ್ನು ಮಠಕ್ಕೆ ದಾನವಾಗಿ ಕೊಡಬೇಕೆಂದು ಸೂಚಿಸಿದರು. ಸ್ವಪ್ನದಲ್ಲಿ ಸೂಚಿಸಿದಂತೆ ಶ್ರೀಗಳವರ ದೇಹವನ್ನು ಕಳಾಕರ್ಷಣಕ್ಕಾಗಿ ಹೊರಕ್ಕೆ ತೆಗೆದಾಗ, ಏಳು ವರ್ಷದ ಹಿಂದೆ ಹಚ್ಚಿದ ಗಂಧಾಕ್ಷತೆ, ತುಳಸಿಹಾರ, ಶಾಟೀ ಹಾಗೂ ದೇಹದ ಕಾಂತಿ ಹಾಗೇಯೇ ಕಂಗೊಳಿಸುತ್ತಿದ್ದುದನ್ನು ಕಂಡು ಭಕ್ತಜನ ಆಶ್ಚರ್ಯಸಾಗರದಲ್ಲಿ ಮುಳುಗಿದರು. ಶ್ರೀಗಳವರ ಆದೇಶದಂತೆ ವರದಾ ನದಿಯ ತೀರದಲ್ಲಿ ಬೃಂದಾವನ ಪ್ರತಿಷ್ಠಾಪಿಸಿದರು.

ಆ ಸಂದರ್ಭದಲ್ಲಿ ಶ್ರೀ ಭುವನೇಂದ್ರ ತೀರ್ಥರು ಬೃಂದಾವನಕ್ಕೆ ಕುಂಭ ಅಭಿಷೇಕ ಮಾಡಿ, ಮೂಲರಾಮನ ವಿಗ್ರಹಗಳನ್ನು ಮೇಲಿಟ್ಟು, ಕನಕಾಭಿಷೇಕ ಮಾಡಿ, ಹಸ್ತೋದಕವನ್ನು ಸಮರ್ಪಿಸಿ, ಗುರುಗಳ ಅನುಗ್ರಹಕ್ಕೆ ಪಾತ್ರರಾದರು.

ಈ ಎಲ್ಲ ದೃಶ್ಯಗಳನ್ನು ಕಂಡ ಹರಿದಾಸರು "ನೀರೆ ನೀ ನೋಡಿದ್ಯಾ ನೀರಜ ಗಂಡ್ಯಾ ನೀರೆ ನೀ ಪಾಡಿದ್ಯ" ಎಂಬ ಕೀರ್ತನೆಯಲ್ಲಿ ಗುರುಗಳ ಮಹಿಮೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

ಶ್ರೀ ಭುವನೇಂದ್ರ ತೀರ್ಥರು, ಗುರುಗಳಾದ ಶ್ರೀ ಧೀರೇಂದ್ರ ತೀರ್ಥರ ಚರಮ ಶ್ಲೋಕವನ್ನು ಮಾಡಿ, ಅರ್ಪಿಸಿದರು :

*ಧರಣೀ ಮಂಡಲೇ ಖ್ಯಾತಂ ಧೈರ್ಯಾದಿ ಗುಣ ಬೃಂಹಿತಂ ।*
*ಧಿಕ್ಕೃತಾಶೇಷ ವಾದೀಭಂ ಧೀರಸಿಂಹ ಗುರುಂಭಜೇ ॥*

## ಮಹಿಮೆಗಳು

ಅಣುಮಂತ್ರಾಲಯವೆಂದೇ ಪ್ರಸಿದ್ಧವಾದ ಹೊಸರಿತ್ತಿಯ ರಾಯರ ಮಹಿಮೆಗಳು ಮಂತ್ರಾಲಯದ ರಾಯರಂತೆ ತೋರಿದ್ದಾರೆ. ವಂಧ್ಯೆಯರಿಗೆ ಸುತರು, ಮಂದರಿಗೆ ಬುದ್ಧಿ, ನೊಂದವರಿಗೆ ಶಾಂತಿ, ಭೂತ, ಪ್ರೇತಾದಿಗಳ ನಿವಾರಣೆ, ಕುಷ್ಠ-ಕ್ಷಯ ರೋಗಗಳಿಂದ ಮುಕ್ತಿ ನೀಡಿದ ಅನೇಕ ಮಹಿಮೆಗಳು ಇಂದಿಗೂ ಸೇವಕರಿಗೆ ನೀಡುತ್ತಿರುವುದೇ ಸಾಕ್ಷಿ. ಒಟ್ಟಿನಲ್ಲಿ ಶ್ರೀ ಧೀರೇಂದ್ರ ತೀರ್ಥರು ಅಗಮ್ಯ ಮಹಿಮೆರೆನಿಸಿದ್ದಾರೆ.

ಪ್ರತಿ ವರ್ಷವು ಫಾಲ್ಗುಣ ಶುಕ್ಲ, ದ್ವಾದಶಿ, ತ್ರಯೋದಶಿ ಹಾಗೂ ಚತುರ್ದಶಿ ದಿನಗಳಲ್ಲಿ ಆರಾಧನಾ ಮಹೋತ್ಸವವು ಮಂತ್ರಾಲಯದಿಂದ ಆಗಮಿಸುವ ಪೀಠಾಧಿಪತಿಗಳ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಯುತ್ತದೆ. ಇತ್ತೀಚೆಗೆ ಶ್ರೀ ಸುಜಯೀಂದ್ರ ತೀರ್ಥರು ವರ್ಷ ಪರ್ಯಂತವಾಗಿ ಪೂಜಾ ಸೇವೆ ನಡೆಯುವಂತೆ ಶಾಶ್ವತ ನಿಧಿಯನ್ನು ಸ್ಥಾಪಿಸಿ, ವಿಶಾಲ ಮಂಡಪವನ್ನು ನಿರ್ಮಾಣ ಮಾಡಿದ್ದಾರೆ.

ಅಧೂನ ಪೀಠಾಧೀಶರಾದ ಶ್ರೀ ಸುಶಮೀಂದ್ರ ತೀರ್ಥರು ಪ್ರಾಂಗಣಕ್ಕೆ ಮೇಲ್ಛಾವಣಿ, ಅಡುಗೆ ಮನೆ ನಿರ್ಮಾಣ, ಹಾಗೂ ನೀರಿನ ಅನುಕೂಲತೆಗಾಗಿ 20 ಲಕ್ಷ ರೂಪಾಯಿ ವೆಚ್ಚ ಮಾಡಿ ನಿರ್ಮಿಸಿ ನವೀನ ಮಂತ್ರಾಲಯದಂತೆ ಕಂಗೊಳಿಸುವಂತೆ ಮಾಡಿದ್ದಾರೆ. ಶ್ರೀ ಗೋಪಾಲದಾಸರು ಶ್ರೀರಾಘವೇಂದ್ರ ಸುಳಾದಿಯಲ್ಲಿ ಹೇಳಿದಂತೆ –

"ದಿನ ದಿನದೆ ನೂತನಪೂಜಾಗಳಾಗುವವು.
ದಿನ ದಿನಕಿಲ್ಲಿ ನೂತನ ಉತ್ಸವಗಳಾಗುವವು.
ದಿನ ದಿನಕಿಲ್ಲಿ ನೂತನ ವಾರ್ತೆಗಳು."

ಈಗಿನ ರಿತ್ತಿ ಕ್ಷೇತ್ರಕ್ಕೆ ಅನ್ವಯಿಸುತ್ತದೆಂದರು ತಪ್ಪಲ್ಲ. ಸ್ವತಃ ಶ್ರೀ ರಾಯರೇ ಇಬ್ಬರ ಯತಿಗಳ ಮಧ್ಯೆ ನೆಲೆಸಿರುವುದೇ ಸಾಕ್ಷಿಯಾಗಿದೆ.

***

# ಶ್ರೀ ಧೀರೇಂದ್ರ ತೀರ್ಥರ ಸ್ತುತಿಗಳು

## 1. ವರದಾ ತೀರದಿ ಶೋಭಿಪ ಯತಿವರ

ರಾಗ – ರೇ ಗುಪ್ತಿ ತಾಳ – ಆದಿ

ವರದಾ ತೀರದಿ ಶೋಭಿಪ ಯತಿವರ ನ್ಯಾರೇ ನೋಡಮ್ಮಯ್ಯಾ ॥ ಪ ॥

ತ್ವರದಿ ಭಕುತರ ದುರಿತವ ತರಿದತಿ
ತ್ವರದಿ ಪಾಲಿಪ ಧೀರೇಂದ್ರ ಕಾಣಮ್ಮ. ॥ ಅ ॥

ಸುಂದರ ತಮ ವೃಂದಾವನ ಶುಭತರ
ಮಂದಿರ – ಗತ ನ್ಯಾರೇ ನೋಡಮ್ಮಯ್ಯಾ ।
ನಂದದಿ ಮಹಜನ ಸಂದಣಿ ಮಧ್ಯದಿ
ಚಂದಿರ ತೆರದಿಹನ್ಯಾರೇ ನೋಡಮ್ಮಯ್ಯಾ ।
ಇಂದಿರ ಪತಿ –ಗುಣ – ವೃಂದವ ಭಜಿಸುತ
ನಂದದಿ ಶೋಭಿಪನ್ಯಾರೇ ಪೇಳಮ್ಮಯ್ಯಾ ।
ಅಂಧ ಬಧಿರರ ವೃಂದಗಳಿಗಿಷ್ಟವ
ನಿಂದು ನೀಡುವ ವಾದೀಂದ್ರರ ತನುಜ॥ ॥ ೧ ॥

ಮೂಢ ಮತಿಯನು ಓಡಿಸಿ ನಿಜರಿಗೆ
ಗಾಢ ಭಕುತಿಯನು ನೋಡಮ್ಮಯ್ಯಾ ।
ನೀಡುವ, ಭಜಕರು ಮಾಡುವ ಸೇವೆಗೆ
ನೀಡುವ ವರಗಳನ್ಯಾರೇ ನೋಡಮ್ಮಯ್ಯಾ ।
ಪಾಡುವ ದಾಸರು ಬೇಡುವ ಇಷ್ಟವ
ನೀಡುವ ದಿನ್ಯಾರೇ ಪೇಳಮ್ಮಯ್ಯಾ ।
ರೂಢಿಯೊಳಗೆ ಇಷ್ಟ ನೀಡುವ ವಿಷಯದಿ
ಜೋಡುಗಾಣೆನಾ ನೋಡಮ್ಮಯ್ಯಾ ॥ ॥ ೨ ॥

ಭೂತ ಪೀಡೆ ಮಹ ಪ್ರೇತ ಪಿಶಾಚಿಯ
ವ್ರಾತಗಳು ಬವಿ ನೋಡಮ್ಮಯ್ಯಾ ।
ಭೀತಿ ಬಡುತ ಮಹ ಆತುರದಲಿ ಈ
ಭೂತಳ ಬಿಡುತಿಹವೋ ನೋಡಮ್ಮಯ್ಯಾ ।
ಯಾತುಧಾನಗಣ ಈತನ ನಾಮದ
ಭೀತಿಗೆ ಪೋಗುತಿಹದು ನೋಡಮ್ಮಯ್ಯಾ ।
ತಾತನ ತೆರದಲಿ ಈತನು ನಿಜಪದ
ದೂತರ ಪೊರೆವನು ನೋಡಮ್ಮಯ್ಯಾ ।
ದಾತ ಗುರು ಜಗನ್ನಾಥ ವಿಠ್ಠಲಗೆ
ಪ್ರೀತ ಜನರೊಳತಿ ಪ್ರೀತನೀತಮ್ಮಾ ॥ ॥ ೩ ॥

–೦–

## 2. ಎಂದು ಕರುಣದಿಂದ ನೋಡುವಿ

ತಾಳ – ಆದಿ

ರಾಗ – ಮೋಹನ

ಎಂದು ಕರುಣದಿಂದ ನೋಡುವಿ, ಧೀರೇಂದ್ರ ಗುರುವೇ ।
ಎಂದು ನಮಗಾನಂದ ನೀಡುವಿ ॥ ॥ ಪ ॥

ಎಂದು ಕರುಣದಿಂದ ನೋಡುವಿ
ನೊಂದು ಪಾಪದಿಂದ ಬಳಲಿ
ಬಂದು ನಿನ್ನ ಕಂದ ನೆಂ–
ತೆಂದು ಪಾದ ಪೊಂದಿದವನ ॥ ॥ ಅ.ಪ. ॥

ದೂರದಿಂದ ದಣಿದು ಬಂದೆನೊ, ಯತಿರಾಯ
ಚಾರು ವೃಂದಾವನವ ಕಂಡೆನೊ ।
ಭಾರಿ ಭಾರಿ ನೆರೆದ ಪರಿವಾರವನ್ನು ನೋಡಿ ಮನಸು
ಸೇರಿಸಿದೆನೊ ತೋಷದಿಂದ ನಿಮ್ಮ ಧೀರ ಚರಣದಲ್ಲಿ ॥ ೧ ॥

ಅಷ್ಟಗಂಧ ತುಲಸಿ ಮಾಲೆಯ, ಶಾಂತಿನೆಲೆಯ
ಇಟ್ಟ ಅಕ್ಷತೆ ರಕ್ಷಣಾ ಸಿರಿಯ ।
ಶಿಷ್ಟ ಶಾಟಿ ದಂಡಧಾರಿ ಧೀರಸಿಂಹನಾದ ಗುರುವೆ
ಅಟ್ಟು ಎನ್ನ ಅಘದ ರಾಶಿ ನಿಷ್ಠೆಯಿಂದ ಭಜಿಪೆ ನಿಮ್ಮ॥ ೨ ॥

ಶ್ರೇಷ್ಠ ನಿಮ್ಮ ಪಟ್ಟಣಾದೊಳು, ಯತಿರಾಯ ಕೇಳು
ದಿಟ್ಟ ವರದೆ ಮೆಟ್ಟಿ ಹರಿದಿಹಳು ।
ಮುಟ್ಟಿ ಸ್ನಾನ ಮಾಡೆ ಒಟ್ಟು ಹೋಗುವುದು ಗ್ರಹ ಶ್ರೀಕೃಷ್ಣ
ವಿಠ್ಠಲನ್ನ ಭಜಿಪ ಯತಿವರೇಣ್ಯ ಎನ್ನ ॥ ॥ ೩ ॥

-o-

## 3. ವರದ ತೀರದಿ ಮೆರೆವ

ರಾಗ – ಮೋಹನ ತಾಳ – ಆದಿತಾಳ

ವರದಾ ತೀರದಿ ಮೆರೆವ । ಶ್ರೀ ಗುರು ಧೀರೇಂದ್ರರ ।
ಚರಣ ವಾರಿಜ ಭಜಿಪೇ ॥ ಪ ॥

ಮೀರಿದ ವ್ಯಸನ ನಿವಾರಿಸಿ ಸಲಹುವ ।
ಸೂರಿ ಜನರ ನಿತ್ಯ ಸೇರಿಸಿ ಪೊರೆವಂಥ ॥ ॥ ಅ.ಪ. ॥

ವರದೇಂದ್ರರೊಡನಿವರು ಹಿರೆಪಟ್ಟಣ ಪುಣೆಯಲ್ಲಿ ।
ಆ ರಾಮಶಾಸ್ತ್ರಿಯ ಮಂದಿರದೊಳಗೇ ॥
ಸಾರಿ ಪಂಥವ ವಾದ ಮಾಡುತ ।
ಜಾರೆ ಅದ್ವೈತ ಸ್ಮೃತಿಯ ಪತನಕೆ ।
ಆ ರಾಮಶಾಸ್ತ್ರಿಯು ಮೂಲರಾಮಗೆ ।
ಧಾರೆ ದಾನದಿ ಮಂದಿರಾ ಕೊಟ್ಟ ॥ ॥ ೧ ॥

ಕೋರಿ ವೈರಾಗ್ಯವ ಆರಾಧಿಸಿ ವಿಜಯೀಂದ್ರರ ।
ಭಾರಿ ಸನ್ನಿಧಿಯಲ್ಲಿ ಧೀರ ಶ್ರೀಜಯರಾಮಾರ್ಯ ॥
ಚಾರು ಸಂನ್ಯಾಸವನು ಕೊಳ್ಳುತ ।
ವೀರ ಶ್ರೀ ಧೀರೇಂದ್ರ ನಾಮದಿ ।
ಧಾರುಣೀಯೊಳು ಕುಮತ ಗಜಕೆ ।
ಶೂರ ಕೇಸರಿರೆನಿಸಿ ಮೆರೆದಾ ॥ ॥ ೨ ॥

ಮೂಲರಾಮನ ಪೂಜಿಸಿ ಭುವನೇಂದ್ರರಿಗೆ ಇತ್ತು ।
ಸಲಿಸೀ ವ್ಯಾಖ್ಯಾನವ ಗುರುಗುಣಸ್ತವನಕ್ಕೇ ॥
ಹೇಳಿ ನಾರಾಯಣುಪನಿಷತ್ತಿಗೆ ।
ದಿವ್ಯ ವ್ಯಾಖ್ಯಾನವನೆ ಮಾಡುತ ।
ಕೆಲವು ರಚಿಸೇ ಕಾರಕವಾದ ।
ವಿಷಮ ವಾಕ್ಯ ಸಂಗ್ರಹವೆ ಗೈದಾ ॥ ॥ ೩ ॥

ಮನ್ಯೂಸೂಕ್ತಕೆ ದಿವ್ಯ ನರಸಿಂಹ ಪರ ವ್ಯಾಖ್ಯಾನ ।
ಚೆನ್ನಾಗಿ ರಚಿಸುತ ರಿತ್ತೀಲಿ ಸ್ಥಳ ಪೊಂದೂತಾ ॥
ಹತ್ತಿರ ಸತ್ಯಬೋಧತೀರ್ಥರು ।

ಮತ್ತೆ ಶ್ರೀ ಜಗನ್ನಾಥತಿದಾಸಾದಿ ।
ಉತ್ತಮೋತ್ತಮ ಪ್ರವಚನ್ನಜನದಿ ।
ಭಕುತ ಶ್ರೇಷ್ಠರು ಸೇರಿ ಮೆರೆದಾ ॥ ॥ ೪ ॥

ಫಾಲ್ಗುಣ ತ್ರಯೋದಶಿ ಶುಕ್ಲ ಶ್ರೀ ಲಕುಮೀಶನ ।
ಲೀಲೆ ನೆನೆದು ಬೃಂದಾವನವ ಸೇರುತಾ ॥
ಏಳು ವರುಷಕೆ ಭಕುತನೊಬ್ಬಗೆ ।
ಪೇಳೆ ಕಲಾಕರ್ಷಣ ಮಾಡೆ ।
ತುಲಸಿ – ಗಂಧಾಕ್ಷತೆಯ ಸೊಬಗಿನ ।
ಚಲುವ ದೇಹ್ದ ವೃಂದಾವನ ಗೈದ ॥ ॥ ೫ ॥

–೦–

## 4. ಧೀರೇಂದ್ರಾ । ಧೀರೇಂದ್ರಾ ।

ರಾಗ – ಪೂರ್ವಿ ತಾಳ – ಆದಿ

ಧೀರೇಂದ್ರಾ । ಧೀರೇಂದ್ರಾ ।
ಸಾರಿದ ಭಕುತರ । ನೀರಜ ಚಂದ್ರಾ ॥ ॥ ಪ ॥

ವರಹಜ ತಟಸ್ಥಿತ । ಗುರುವರೇಣ್ಯರ ।
ಹಿರಿಯ ಕರುಣವನು । ಧರಿಸಿ ಮೆರೆಯುವ ॥ ೧ ॥

ಗುರು ವರದೇಂದ್ರರ । ಕರ ಸರಸಿಜನೆ ।
ವರದಾ ತೀರದಿ । ಇರುವ ಮುನೀಂದ್ರ ॥ ೨ ॥

ಪಂಡಿತನೆಂಬುವ । ಡಂಭವು ತೊಲಗದೆ ।
ಡಿಂಬದಿ ಬಿಂಬನ । ಕಾಂಬುವದೆಂತೋ ॥ ೩ ॥

ಭವ ಬಂಧನದಲಿ । ನವೆದೆನೊ ಬೇಯುತ ।
ತವ ಪಾದ ಸಾರಿದೆ । ಕವಿಜನಗೇಯ ॥ ೪ ॥

ತುರು ಕರುವನು ತಾ । ಮರೆಯುವುದುಚಿತವೆ ।
**ವರದ ವಿಠ್ಠಲನ** । ಸ್ಮರಣೆ ನಿರುತ ಕೊಡು ॥॥ ೫ ॥

–೦–

## 5. ಧೀರೇಂದ್ರ ಗುರುರಾಯಾ

ರಾಗ – ಭೂಪ | ತಾಳ – ಆದಿ

ಧೀರೇಂದ್ರ ಗುರುರಾಯಾ । ಸಂ। ಸಾರಾಬ್ಧಿ ದಾಟಿಸಯ್ಯ ॥
ಸೇರಿದವರಭೀಷ್ಟ ಪೂರೈಸುತ ವರದಾ
ತೀರ ರಿತ್ತಿಯೊಳಿದ್ದ ತೋರುವಿ ಮಹಿಮೆಯ ॥ ॥ ಪ ॥

ಯೋಗ್ಯತೆಗಳ ನರಿದು । ಭವ ಪರಿ
ಭೋಗ್ಯ ಭೋಗಗಳರಿದು ॥
ಯೋಗ್ಯ ಭೋಗಗಳಿತ್ತು ಮುಗ್ಗಿಸಿ ವಿಷಯದಿ
ಓಗ್ಗು ವಂದದಿ ಮಾಳ್ಪ ಭಾಗ್ಯ ದಯಾನಿಧಿ ॥ ॥ ೧ ॥

ಕುಷ್ಟ ಭಗೇಂದ್ರ ಕ್ಷಯ । ಬಾಲಗ್ರಹ
ದುಷ್ಟ ಪಿಶಾಚಿ ಭಯ ॥
ಥಟ್ಟನೆ ಓಡಿಸಿ ಮುಟ್ಟಿ ಭಜಿಸುವರ
ಇಷ್ಟಾರ್ಥ ಗರೆಯುವ ಶ್ರೇಷ್ಠ ಯತೀಂದ್ರ ಶ್ರೀ ॥ ॥ ೨ ॥

ವರದೇಂದ್ರ ಕರಕಮಲ । ಭವ ಪರಿ
ಹರಿಸೊ ಯನ್ನಯ ಶಮಲ ॥
ವರದ ಶ್ರೀನಿವಾಸನೆ ಕರುಣದಿ ರಸಿಯೊಳು
ಪರವಾದಿ ಗಜಗಳ ತರಿದ ಮೃಗೇಂದ್ರ ಶ್ರೀ ॥ ॥ ೩ ॥

-೦-

## 6. ಧೀರೇಂದ್ರ ಗುರುಗಳ ಚಾರು ಚರಣ

ರಾಗ – ಸಾರಂಗ (ಗೋಪಿ ಗೀತೆಯ ಮಟ್ಟು) ತಾಳ – ಆದಿ

ಧೀರೇಂದ್ರ ಗುರುಗಳ ಚಾರು ಚರಣ ಸ್ಮರಿಸಿರೋ
ಚಾರು ತೀರ್ಥರ ಕರಾರ್ಚಿತನ ತೋರ್ವರೋ ॥ ॥ ಪ ॥

ವರದೇಂದ್ರ ತೀರ್ಥರ ಕರಜ ಕುವರ ರೆನಿಸಿದ ।
ಗುರು ವಿಜಯೀಂದ್ರರ ಪರಮ ಕರೆಯ ಲಾಲಿಸಿ ॥ ॥ ೧ ॥

ವರದಾ ತೀರದಿ ವರವೀವ ಯತಿಗಳ ।
ಗುರು ಪಾದ ಉದಕವ ಸ್ವೀಕರಿಸೆ ಸತ್ಫಲ ॥ ॥ ೨ ॥

ವರದೇಂದ್ರ ರಿಂಗಿತ ಪರಮ ಹರಿಕಥಾಮೃತ ।
ಗುರುವೆ ಶ್ರವಣಿಸಿ ಚರಣ ದಾಸ ಗರುಹಿದ ॥ ॥ ೩ ॥

ಮನ್ಯು ಸೂಕ್ತದಿ ಸ್ತಂಭಜನ ತೋರಿಸಿ ।
ಮಾನ್ಯ ರೆನಿಸಿದ ಜ್ಞಾನಿ ಪ್ರಾಣಾವೇಶರ ॥ ॥ ೪ ॥

ಪುರ ಪೂನಾನಗರಿಯ ಪರವಾದಿ ಶಾಸ್ತ್ರಿಯ ।
ವರ ಮಹಾಲಯ ಗುರುವರಾಶ್ರಮೆನಿಸಿದ ॥ ॥ ೫ ॥

ಗುರು ಗುಣ ಸ್ತವನವ ಸರಳವ್ಯಾಖ್ಯಾನಿಸೆ ।
ಹರುಷ ದ್ಧರಸಿದ ಗುರು ವಾದೀಂದ್ರ ಪ್ರಿಯರ ॥ ॥ ೬ ॥

ಪುರುಷ ಸೂಕ್ತಕೆ ಜ್ಞಾನ, ಸ್ಪರುಶ ಮಾಡಲು ।
ಸ್ಫುರಿಸೆ ಸುಧೆಯನು ಗುರು ಸವಿದು ಹಾಡಿದ ॥ ॥ ೭ ॥

ಶ್ರೀ ಸೂಕ್ತ ದರ್ಶಿಸಿ ಹೊಸ ನೇತ್ರ ತೆರೆಸುತ ।
ದಾಸ ವೃಂದಕೆ ಸಾಸಿರಾಕ್ಷನ ತೋರಿದ ॥ ॥ ೮ ॥

ಆದಿ ನಾರಾಯಣನ ವೇದಾಂತ ದೃಷ್ಟಿಸಿ ।
ಸುಧೆಯ ಸುಣಿಸಿದ ಗುರು ಮಧ್ವ ಪ್ರೀಯರ ॥ ॥ ೯ ॥

ಭೂತಾದಿ ವ್ಯಾಧಿಯ ವಾತ ಜನಕ ನೊಲಿಮೆಲಿ ।
ಖಾತ್ರಿ ಕಳೆಯುವ ಯತಿ ಶ್ರೇಷ್ಠ ಆಪ್ತರ ॥ ॥ ೧೦ ॥

ಯತಿ ರತ್ನ ರಿರುತಿಹ ರತುನ ರಿತ್ತಿ ಕ್ಷೇತ್ರವ ।
ಸತತೆ ಪೊರೆವಳು ವರದೆ ಸ್ತುತಿಸೆ ಪೂಜ್ಯರ ॥ ॥ ೧೧ ॥

ಹರಿ ವಾಯು ಗುರುಗಳ ಕರುಣ ಪಾತ್ರರೆನಿಸುತ ।
ಪುರುಷಾರ್ಥ ಕರುಣಿಪ ಪರಮಸಂಹ ಶ್ರೇಷ್ಠರ ॥ ॥ ೧೨ ॥

ರಾಗ ನೀಗಿಸಿ ಹರಿ ಯೋಗ ದಿರಿಸುವ ।
ತ್ಯಾಗಿ ಎನಿಸಿದ ಗುರು ವಿರಾಗಿ ಪೂಜ್ಯರ ॥ ॥ ೧೩ ॥

ಪದ್ಮನಾಭ ಯತಿಯ ಪಾದ ಪದ್ಮ ಸೇವಿಸಿ ।
ಬದ್ಧ ಜೀವರ ಉದ್ಧರಿಪ ಗುರುವರ ॥ ॥ ೧೪ ॥

ಆರ್ತ ಭಕ್ತರ ಪ್ರಾರ್ಥನೆಯ ಮನ್ನಿಸೀ ।
ಪುತ್ರರನೆ ಕರುಣಿಪ ಸೂತ್ರಿ ಕೃಷ್ಣ ದಾಸರ ॥ ॥ ೧೫ ॥

ಸ್ಮರಿಸಲನುದಿನ ಸ್ಮರನ ಬಾಧೆ ಕಳೆಯುತ ।
ಸಿರಿ ವರನ ಅಂಘ್ರಿಲಿ ಸ್ಥಿರ ಬುದ್ಧಿ ಕರುಣಿಪ ॥ ॥ ೧೬ ॥

ದಿಗ್ವಿಜಯ ರಾಮನ ಹೃದಯ ದುರ್ಗ ಮಧ್ಯದಿ ।
ಭಾಗ್ಯ ಸವಿಯುವ ಸುಗುಣೇಂದ್ರ ವಂದ್ಯರ ॥ ॥ ೧೭ ॥

ವೈಕುಂಠ ವಾಸುದೇವನ ಭಕ್ತಿಯಲಿ – ಅರ್ಚಿಸಿ ।
ಮುಕ್ತಿ ದೋರುವ ಸುಕೃತೀಂದ್ರ ವಂದ್ಯರ ॥ ॥ ೧೮ ॥

ಮೂಲರಾಮನ ವಿಮಲ ಮೂರ್ತಿ ಧ್ಯಾನದಿ ।
ಕಲಿ ಮಲವ ಕಳೆಯುವ ಸುಶೀಲೇಂದ್ರ ವಂದ್ಯರ ॥ ॥ ೧೯ ॥

ಶರ್ವ ವಂದ್ಯನೆ ಸರ್ವ ಮೂಲ ಸಂಪದ ।
ಸಾರ್ವರಿಗೆ ಉಣಿಸುವ ಸುವ್ರತೀಂದ್ರ ವಂದ್ಯರ ॥ ॥ ೨೦ ॥

ಕಾಯ ಅಸ್ಥಿರ ವಾಯು ತತ್ವ ಸುಸ್ಥಿರ ।
ಧ್ಯೇಯ ಕುಣಿಸುವ ಸುಯಮೀಂದ್ರ ವಂದ್ಯರ ॥ ॥ ೨೧ ॥

ವೃಜಿನ ನೀಗಿಸಿ ಸುಜನ ಸಂಗದಿರಿಸುವ ।
ಸುಜಯೀಂದ್ರ ವಂದ್ಯರ ವಿಜಯೇಂದ್ರ ದಾಸರ ॥ ॥ ೨೨ ॥

ದಶಪ್ರಮತಿ ಪಥದಿ ವಾಸುದೇವನ ಸೇವೆಯ ।
ದಾಸರಿಗೆ ಹಿಡಿಸುವ ಸುಶಮೀಂದ್ರ ವಂದ್ಯಕರ ॥ ॥ ೨೩ ॥

ಪವನ ಪಥದಲಿ ಭವದ ಮೋಹ ನೀಗುತ ।
ಭುವನೇಂದ್ರ ರ್ಹಸ್ತಿಕೆ ಸೇವ ಸೂತ್ರ ವಹಿಸಿದ ॥ ॥ ೨೪ ॥

ಚೈತ್ರ ಪೂರ್ವಮಾಸ ತಾರ ಪತಿಯ ಪಕ್ಷದ ।
ಚತುರ್ದಶಿಯ ಪೂರ್ವದಿ ಕ್ಷಿತಿ ಪತಿಯ ಸೇರಿದ ॥ ॥ ೨೫ ॥

ಅಲ್ಪ ಮತಿಲಿ ಬರೆದ ತಪ್ಪು ಹಂಸ ತಲ್ಪ ಎಣಿಸದೆ ।
ಕಲ್ಪ ಕಲ್ಪದಿ ಪೊರಿ ಶೇಷ ತಲ್ಪ ಪ್ರಿಯವರ ॥ ॥ ೨೬ ॥

ಧೀರವಿಠ್ಠಲದಾಸ ಧೀರೇಂದ್ರ ತೀರ್ಥರ ।
ಸ್ಮರಿಸಲನುದಿನ ಪುರುಷಾರ್ಥ ಚಿದ್ಘನ ॥ ॥ ೨೭ ॥

-೦-

## 7. ಮರೆಯ ಹೊಕ್ಕೆ ನೊ

ರಾಗ – ಕಾಂಬೋಧಿ ತಾಳ – ಝುಂಪ

ಮರೆಯ ಹೊಕ್ಕೆ ನೊ ನಿನ್ನ । ಮರೆಯ ಬೇಡವೋ ಎನ್ನ ।
ಕರುಣ ನಿಧಿ ಶ್ರೀ ಗುರು । ಧೀರೇಂದ್ರ ರಾಯಾ ॥ ॥ ಪ ॥

ಹೇಶಿ ವಿಷಯದಿ ಸಿಲುಕಿ ಘಾಸಿಯಾದೆನೊ ಗುರುವೆ ।
ಕ್ಲೇಶ ಪಡುತಿಹೆ ನಾನು ಕ್ಷಣ ಕ್ಷಣದಲೀ ॥
ದೋಷ ರಾಶಿಯ ಕಳೆದು ಪೋಷಿಸೆನ್ನನು ದಯದಿ ।
ಭೂಸುರ ಪ್ರಿಯ ಶ್ರೀ ಧೀರೇಂದ್ರ ರಾಯಾ ॥ ॥ ೧ ॥

ಪಾಪಿಗಳೊಳು ನಾನು ಅತಿ ಪಾಪಿಯಾಗಿಹೆನು ।
ಶ್ರೀ ಪಾದಕೀಗ ಶರಣು ಬಂದಿಹೆನೋ ॥
ಅಪಾರ ಮಹಿಮರೆ ನಿಮ್ಮ ಕೃಪಾವಲೋಕನದಿಂದ ।
ಈ ಪಾಮರನ ಉದ್ಧರಿಸೋ ಧೀರೇಂದ್ರ ರಾಯಾ ॥ ॥ ೨ ॥

ನಿಮ್ಮ ಸೇವೆಯ ನೆಂದೂ ಮಾಡಿದವ ನಾನಲ್ಲ ।
ಹೆಮ್ಮೆಯಲಿ ಮಣೆ ಗೆದ್ದ ಅಜ್ಞ ನಾನು ॥
ಎಮ್ಮ ಅಪರಾಧವನು ಮನ್ನಿಸಿ ನೀ ಬೇಗ ।
ರಮ್ಮ ಯರಸನೆ ತೋರು ಧೀರೇಂದ್ರ ರಾಯಾ ॥ ॥ ೩ ॥

ಹೇಸಿ ಸಂಸಾರದ ಆಸೆಯನು ನೀ ಬಿಡಿಸಿ ।
ಲೇಶ ಭಕುತಿಯ ಕೊಡೋ ಶ್ರೀ ಚರಣದಲ್ಲಿ ॥
ದಾಸ ದಾಸರದಾಸ ದಾಸನ್ನ ಮಾಡಿ ಸಲಹೋ ।
ಹೊಸರಿತ್ತಿ ಪುರವಾಸ ಧೀರೇಂದ್ರ ರಾಯಾ ॥ ॥ ೪ ॥

ವರದ ತೀರದಿ ನಿಂತ ವರದ ಹಸ್ತನು ನೀನು ।
ವರದೇಂದ್ರ ಗುರುವರ್ಯ ಕರಕಮಲ ಜಾತಾ ॥
ವಾರಿಧಿ ಶಯನ 'ಶ್ರೀ ವೆಂಕಟೇಶನ' ನಿತ್ಯ ।
ವಾರ ವಾರಕೆ ಭಜಿಪ ಧೀರೇಂದ್ರ ರಾಯಾ ॥ ॥ ೫ ॥

–o–

## 8. ನೀರೆ ನೀ ನೋಡಿದ್ಯಾ

ರಾಗ – ಮೋಹನ ತಾಳ – ಆದಿ

ನೀರೆ ನೀ ನೋಡಿದ್ಯಾ । ನೀರಜ ಗಂಧೆ ನೀರೆ ನೀ ಕೇಳಿದ್ಯಾ ॥ ಪ ॥

ಧಾರುಣಿಯೊಳ್ಪರದಾ । ತೀರ ರಿತ್ತಿಯೊಳಿರ್ದಾ
ಧೀರೇಂದ್ರರ ಚರ್ಯ । ಚಾರು ಚಮತ್ಕೃತಿ ॥ ॥ ಅ.ಪ ॥

ಅಸ್ಮ ದಂತೀ ದೇಹವು ಶಾಶ್ವತವಲ್ಲಾ
ನಶ್ವರ ವಾಗಿಹುದೂ ಪ್ರಾಂತಕೆ ಕ್ರಿಮಿ ವಿ
ಡ್ಭಸ್ಮಿ ಸಂಜ್ಞಿತ ವಾಗೋದು, ಅರದರೇನು
ಸಸ್ಮಿತ ನನು ಸಲ್ಪ ಕಶ್ಮಲಾಗದ ರವಿ
ರಶ್ಮಿ ಯಂತ್ಹೊಳೆ ಯುವ ವಿಸ್ಮಯ ಮಾತುಗಳ ॥ ॥ ೧ ॥

ಇನ್ನು ದಾರಿಂದಲೀ ಸಾಧ್ಯಯ ವಾಗದ
ಮನ್ಯು ಸೂಕ್ತ ಮುಂತಾದಾ ನಾರಾಯಣ
ಪನ್ನ ರುಕ್ವ್ಯಾಖ್ಯಾನ ವಾ ಮಾಡೀ ಮುದದಿ
ಮನ್ಯು ರಹಿತರಾಗಿ ಸಂನ್ಯಾಸಾ ಧರಿಶೀದಾ
ಧನ್ಯರು ಧರೆಯೊಳು ಮಾನ್ಯ ಮಹಿಮೆಗಳ ॥ ॥ ೨ ॥

ಪಾಲಕ ರಾಜ ಗೋಪಾಲನ ದಯದಿಂದಾ
ಯೇಳು ವರುಷ ಭೂಮಿಯಲೀ ವಾಸವ ಮಾಡಿ
ಬಾಳಿದಾ ನಂದದಲೀ ಮೇಲಕೆ ತೆಗಿಯೆ
ಫಾಲಾಲಕ್ಷತಾ ಗಂಧಾ ಮೇಯಿಕಟ್ಟಿನ ಶಾಠಿ
ಮೂಲ ಗುಂದದಿ ತುಳಸಿ ಮಾಲಿ ಹ್ಯಾಗಿಹುದೆಂದು ॥ ॥ ೩ ॥

–೦–

## 9. ಭಜಿಸು ನಿರಂತರ

ರಾಗ – ಮೋಹನ                                                                                   ತಾಳ – ಆದಿ

ಭಜಿಸು ನಿರಂತರ ಗುರು ಧೀರೇಂದ್ರರ || ಪ ||

ನಿಜ ಜನೋದ್ಧಾರಕ ಯತಿ ಚಂದ್ರಮರ || ಅ.ಪ. ||

ಸದ್ಗ್ರಂಥಗಳ ರತ್ನಗಳ ಮಾಲೆಯ ಹರಿಗರ್ಪಿಸಿ
ಉದ್ಗ್ರಂಥಗಳನ್ನು ಸುಲಭದಿ ವಿವರಿಸಿ ।
ವಿತ್ತಂಡ ವಾದಿ ಪಂಡಿತರ ಖಂಡಿಸುತ
ಕೋದಂಡನ ಪದಗಳ ಕೊಂಡಾಡಿದರ || || ೧ ||

ಜ್ಞಾನ ಭಕ್ತಿ ವೈರಾಗ್ಯ ಶಿಖಾಮಣಿ
ಜ್ಞಾನ ಜನಾನತ ಮಹಿಮ ಶಿರೋಮಣಿ ।
ಅಜ್ಞಾನ ಕತ್ತಲೆಯ ನಂದಿಪ ದಿನಮಣಿ
ಸುಜ್ಞಾನವ ಕರುಣಿಪ ಸುಧೀಮಣಿಗಳ || || ೨ ||

ವೇದ ನಿಜಾರ್ಥವ ಸುಜನಕೆ ತಿಳಿಸುತ
ಮೋದ ತೀರ್ಥರ ಸತ್ತತ್ವ ಬೋಧಿಸುತೆ ।
ನಾದ ಪ್ರಿಯ ಶ್ರೀ ಹರಿಯ ನೆನೆಯುತ
ವರದಾ ತೀರದಿ ರಾಜಿಸಿ ಮೆರೆವರ || || ೩ ||

– O –

(ರಚನೆ : ಕುಂ|| ಸೌ|| ಶಕುಂತಲಾಬಾಯಿ
ರಿತ್ತಿ ಸುಬ್ಬಣ್ಣಾಚಾರ್ಯ)

## 10. ಲಾಲಿ ಲಾಲಿ

ರಾಗ – ಪೀಲು ತಾಳ – ಆದಿ

ಲಾಲಿ ಲಾಲಿ ಗುರು ಧೀರೇಂದ್ರ ವರ್ಯಾ ।
ಲಾಲಿ ತ್ರಿಭುವನದೊಳಗೆ ನಿನಗಾರು ಸರಿಯೆ ॥ ॥ ಪ ॥

ವಿಸ್ತರದ ಪಲ್ಲಕ್ಕಿ ಏರಿ ಬರುವಾಗ
ಸುತ್ತ ಭೂಸುರರೆಲ್ಲ ನೆರೆದಿರಲು ಬೇಗ ॥
ಮತ್ತೆ ವೇದೋಕ್ತದಲಿ ಪಾಡುತ್ತಲೀಗ
ರತ್ನ ಮಂಟಪ ತಂದು ಇಳಿಸಿದರು ಬೇಗ ॥ ॥ ೧ ॥

ನವರತ್ನ ಮಯವಾದ ತೊಟ್ಟಿಲದಲ್ಲಿ
ಪವನ ಸೇವಿಸಿ ಗುರುಗಳಿರಿಸಿದರು ಅಲ್ಲಿ ॥
ದಿವಿಜರೆಲ್ಲರು ಕೂಡಿ ವೇದ ಶಾಸ್ತ್ರದಲಿ
ತವಕದಿ ಆಚಾರು ತೂಗೆ ವಿನಯದಲಿ ॥ ॥ ೨ ॥

ಸಾಲು ಸಾಲು ದಿವಿಜ ಮಸ್ತಕದ ಮಣಿಯೆ
ಲೀಲೆಯನು ನೋಡಿ ಸುರರೆಲ್ಲ ಮನದಣಿಯೆ ॥
ಮೂಲೋಕದ ಅಖಿಳ ಜನರು ನಿನಗೆಣಿಯೆ
ಪಾಲಿಸೆನ್ನನು ನೀನು ಯತಿ ಶಿರೋಮಣಿಯೆ ॥ ॥ ೩ ॥

ಇಷ್ಟು ವೈಭವನೆಲ್ಲ ದೃಷ್ಟಿಯಿಂದ ನೋಡಿ
ತುಷ್ಟರಾಗಿ ಮನದ ಕಷ್ಟಗಳ ದೂಡಿ ॥
ಶ್ರೇಷ್ಠ ಯತಿ ನೀನಹುದೆಂದು ಪಾಡಿ
ಮುಟ್ಟಿ ಭಜಿಸುವಗೆ ಇಷ್ಟಾರ್ಥ ನೀಡಿ ॥ ॥ ೪ ॥

ಜಯ ಜಯತು ವರದೇಂದ್ರ ಕರಕಮಲ ಜಾತ
ಜಯತು ವರದಾ ತೀರದಲ್ಲಿರುವ ಖ್ಯಾತ ॥
ಜಯತು ನಂಬಿದ ಜನಕೆ ಅಭಯ ಪ್ರದಾತ
ಜಯತು ಶ್ರೀ ಮುದ್ದುಕೃಷ್ಣ ವಿಠ್ಠಲಗೆ ಪ್ರೀತ ॥ ॥ ೫ ॥

–೦–

# 11. ಶ್ರೀ ಧೀರೇಂದ್ರ ತೀರ್ಥರ ಮಂಗಳಾಷ್ಟಕ

ರಾಗ – ಪೂರ್ವಿ ತಾಳ – ಆದಿ

ಉಕ್ತಿ : ಪ್ರಕ್ರಮಣೇ ಗುರೋರ್ವಿಜಯತೇ ಯುಕ್ತಿಶ್ಚ ಯಸ್ಯ ಪ್ರಭೋ ।
ಭಕ್ತಿ : ಶ್ರೀಮತಿ ಭೂಮಿಜಾ ಪರಿವೃಢೇ ಮುಕ್ತಿ ಪ್ರದಾಯಿನ್ಯ ಹೋ ॥
ಶಕ್ತಿ ಶ್ಯಾಪ್ಯತುಲಾ ಸದಾ ಪ್ರವಚನೇ ಸಕ್ತಿಶ್ಚ ದೀನೇ ದಯಾ ।
ವ್ಯಕ್ತಿ ಧೀರಜನೇಂದ್ರ ತೇ ಗುಣಗಣಾನ್ವಕ್ತುಂ ಸ್ಫುಟಂ ಕೋ ಭುವಿ ॥೧॥

ನ್ಯಾಯನ್ಯಾಯ ನಯೇ ಕಣಾದ ಮುನಯೇ ವಿದ್ವೇಷಿ ವಿದ್ವಜ್ಜಯೇ ।
ತೂರ್ಣಂ ಪೂರ್ಣಧಿಯೇ ಪುನಸ್ಸನಕಯೇ ಸಂನ್ಯಾಸಿನಾಂ ಸಂಚಯೇ ॥
ಚಾತುರ್ಯಾ ತಿ ಶಯೇ ಕಲಾಸು ಗುರವೇ ಧೈರ್ಯೋಚ್ಚಯೇ ಮೇರವೇ ।
ಶ್ರೀ ಧೀರೇಂದ್ರ ಯತೀಂದ್ರ ದಾನ ವಿಷಯೇ ತೇಽ ದ್ಯಾಪಿ ಕಲ್ಪದ್ರುವೇ ॥೨॥

ಶ್ರೀಲಃ ಶ್ರೀಪತಿ ವತ್ಸರೋರುಹ ಜವದ್ಬಾಣೇ ವಿಲಾಸಾಸ್ಪದಂ ।
ಶಂಭು ರ್ವಾ ವೃಷ ಸಂಭವ ಸ್ಸವಿತೃ ವತ್ಸ ಚ್ಚಕ್ರ ವಾಕ ಪ್ರಿಯಃ ॥
ದೇ ವೇಂದ್ರಶ್ಚ ಸುಧಾರ್ಥದೋ ಹಿಮಗುವ ದ್ಭೂಯಃ ಕಲಾನಾಂ ನಿಧಿ ಃ ।
ಶ್ರೀ ಧೀರೇಂದ್ರ ಯತೀಶ್ವರೋ ಮನು ಗುರುರ್ದದ್ಯಾದ ಭೀಷ್ಟಂ ಸದಾ ॥೩॥

ಸಂಸ್ಥಾನಾಧಿಪತಿ ರ್ಯತೀಂದ್ರ ಭುವನೇಂದ್ರಾರ್ಯಃ ಸಮಂ ಸಜ್ಜನೈ ಃ ।
ಯ ಸ್ತಾರತಮ್ಯ ಗಧೀತವಾನ್ ದಶಯತೇ ಃ ಶಾಸ್ತ್ರೋಕ್ತ ತತ್ವಂ ಪರಮ್ ॥
ಕಿಂ ಭೂಮೋನ್ಯ ಜನಃ ಸುದರ್ಶನ ಮಹಾಚಾರ್ಯಃ ಪ್ರವರ್ಯಃ ಸತಾಂ ।
ಶ್ರೀ ಧೀರೇಂದ್ರ ಯತೀಶ್ವರೋ ಮಮ ಗುರುರ್ದದ್ಯಾದಭೀಷ್ಟಂ ಸದಾ ॥೪॥

ಸಪ್ತತ್ರಿಂಶತಿ ಭೂರಿ ಬೋಧ ರಚಿತೇ ಗ್ರಂಥೇ ಜಯಾರ್ಯೋದಿತೇ ।
ಪದ್ಧತ್ಯಾದಿ ನಿಬಂಧನೇ ವರ ಸುಧಾ ತತ್ವ ಪ್ರಕಾಶಾದಿಕೇ ॥
ಏತತ್ತತ್ವ ಮಿದಂ ಸುಬೋಧಮಿಹ ದುರ್ಬೋಧಂ ವ್ಯನಕ್ತೀವ ಯಃ ।
ವ್ಯಾಖ್ಯಾನಂ ಪ್ರಕಟೀ ಕರೋತಿ ಸಮುತಿಂ ಧೀರೇಂದ್ರತೀರ್ಥಂ ಭಜೇ ॥೫॥

ಯಸ್ಯೋಪನ್ಯಸನಂ ಚೆ ನಾತಿ ಜವನಂ ನಾತಿತ್ವರಂ ಸತ್ವರಂ ।
ಸಾಂದ್ರಂ ನ ಸ್ಖಲನಂ ಸ್ವಪಕ್ಷ ಸುಪರಿಷ್ಕಾರೆ ಪ್ರಕಾರ ಕ್ಷಮಮ್ ॥
ದಕ್ಷಂ ಮಂಕ್ಷು ವಿಪಕ್ಷ ಕಕ್ಷೆ ದಲನೇ ವಿದ್ವದ್ವಿ ಕಕ್ಷಂ ಮುಹುಃ ।
ಶ್ರೀ ಧೀರೇಂದ್ರ ಯತೀಶ್ವರೋ ಮಮ ಗುರುರ್ದದ್ಯಾದ ಭೀಷ್ಟಂ ಸದಾ ॥೬॥

ಯಾವಚ್ಛಾ್ರ ವಕ ಲೋಕ ಸಂಶಯ ಹದಂ ಹತ್ವಾ್ರರ್ಥ ಸಂಭೋಧಕಂ ।
ಯದ್ವಾ್ಯಖ್ಯಾನ ಮಹೋ ಧೃಡೋತ್ತರ ಯುತಂ ಸತ್ಸಂಪ್ರದಾಯಾನ್ವಿತಂ ॥
ಲೋಡಂತೇ ಭುವಿ ಕೇ ನಿಶಮ್ಯ ವಿಬುಧಾಸ್ಸರ್ವಂ ಮಹಾ ಮಂಡಲೇ ।
ಶ್ರೀ ಧೀರೇಂದ್ರ ಯತೀಶ್ವರೋ ಮಮ ಗುರುರ್ದದ್ಯಾದ ಭೀಷ್ಟಂ ಸದಾ ॥೭॥

ಗಂಗಾತೀರ್ಥ ಮುಖಾಗ್ರ ತೀರ್ಥ ಗಮನಂ ತನ್ಮಜ್ಜನಂ ಸಜ್ಜನೈಃ ।
ವೇದವ್ಯಾಸ ಸಮೂಲ ಸದ್ರಘುಪತೇಃ ಕುರ್ವನ್ ಸಪರ್ಯಾಂ ಮುಹುಃ ॥
ಸಾತಾರಾ ಪುನಯಾದಿ ರಾಜನಗರೇ ತದ್ರಾಜಕೈ ಃ ಸೇವಿತಃ ।
ಶ್ರೀ ಧೀರೇಂದ್ರ ಯತೀಶ್ವರೋ ಮಮ ಗುರುರ್ದದ್ಯಾದಭೀಷ್ಟಂ ಸದಾ ॥೮॥

*ಧರಣೀ ಮಂಡಲೇ ಖ್ಯಾತಂ ಧೈರ್ಯಾದಿ ಗುಣಬೃಂಹಿತಂ ।*
*ಧಿಕ್ಕೃತಾ ಶೇಷ ವಾದೀಭಂ ಧೀರ ಸಿಂಹ ಗುರುಂ ಭಜೇ ॥*

*॥ ಇತಿ ಸಾತರೇ ಆಚಾರ್ಯ ವಿರಚಿತ*
*ಶ್ರೀ ಧೀರೇಂದ್ರ ತೀರ್ಥ ಮಂಗಳಾಷ್ಟಕ ಸಂಪೂರ್ಣಂ ॥*

-೦-

## 12. ಶ್ರೀ ಧೀರೇಂದ್ರಾಷ್ಟಕಮ್

ಶ್ರೀರಾಮ ಪಾದ ಸರಸೀರುಹ ಷಟ್ಪದೇಂದ್ರ
ಧೀರೇಂದ್ರ ವಂದಿತ ಪದಾಂಬುಜ ತಾಪಸೇಂದ್ರ ।
ತಾಪತ್ರಯಘ್ನ ಕರುಣಾಮೃತ ಪೂರಿತಾಕ್ಷ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೧ ॥

ಆನಂದತೀರ್ಥ ಸಮಯಾಬ್ಧಿತಿ ಮಿಂಗಿಲೇಶ
ದೀನಾವಲೀ ಶರಣ ಸದ್ಗುಣ ರತ್ನ ಶಾಲಿನ್ ।
ವೈರಾಗ್ಯ ಭಾಗ್ಯ ವರದಾ ತಟನೀ ತಟಸ್ಥ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೨ ॥

ಪದ್ಮಾಕ್ಷ ಮಂಜು ತುಲಸೀ ನವ ಮಾಲ್ಯ ಶೋಭಿನ್
ಕಾಷಾಯ ಚೈಲ ಧರ ಭೂಷಿತ ಸಜ್ಜನಾನಾಮ್ ।
ನಾನಾ ವಿಧೇಷ್ಟದ ಸದಾ ಭಜತಾಂ ಜನಾನಾಂ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೩ ॥

ಘ್ನೇರಾಮಯಘ್ನ ಭಜತಾಂ ವಸುಧಾತಲೇಽಸ್ಮಿನ್
ಗೀರ್ವಾಣ ಭೂರುಹ ಸುಧಾರ್ಣವ ಪಾರ ದೃಶ್ವನ್ ।
ಸನ್ಮಾತರಿಶ್ವ ಜಯ ಯೋಗಿ ಕೃಪಾಸುಪಾತ್ರ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೪ ॥

ಸಲ್ಲೋಕ ಕೋಕ ತರಣೇ ತರಣೇ ಭವಾಬ್ಧೇಃ
ನಿಷ್ಣಾತ ಸೇವಕ ಜನಸ್ಯ ರಹಸ್ಯ ವೇತ್ತುಃ ।
ದುರ್ವಾದಿ ಕುಂಜರ ವಿಮರ್ದನ ಕೇಸರೀಂದ್ರ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೫ ॥

ವೃಂದಾವನಸ್ಥ ವರದೇಂದ್ರ ಕರಾಂಬುಜೋತ್ಥ
ಶ್ರುತ್ಯರ್ಥ ಸಾರವಿದನಂತ ಗಮೀಷ್ಟ ನಂತ ।
ಶ್ರೀ ವಲ್ಲಭಾರ್ಪಿತ ಸುಚಂದನ ಭೂಷಿತಾಂಗ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೬ ॥

ಪ್ರತ್ಯರ್ಥಿ ಪಂಡಿತ ಪರಾಜಯ ದಕ್ಷ ದೀಕ್ಷ
ಸಚ್ಛಿಷ್ಯ ಚಾತಕಘನಾಘನ ಕಾಮಧೇನೋ ।
ಭೂ ಮೌ ಸದಾ ಪ್ರಣಮತ ಅಮಮರ ಸ್ವಭಾವ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೭ ॥

ಕಾಮಾರಿ ವೈರಿ ದಮನ ಸ್ಥಿರ ಸಂಘ ಬಂಧೋ
ಕಾಮಾರಿ ವೈರಿ ಜಯಿನಾಂ ಮಹತಾಂ ಮುನೀನಾಂ ।
ಸೀಮಾತಿ ದೂರ ಮಹಿಮಾ ಚಿತ ಲೋಕ ವಂದ್ಯ
ಧೀರೇಂದ್ರ ತೀರ್ಥ ! ಮಮ ದೇಹಿ ಸಮಸ್ತಮಿಷ್ಟಮ್ ॥ ॥ ೮ ॥

ವಾಯೀ ಪ್ರಸಿದ್ಧ ಗುರುರಾಜ ಸುತೋಣ್ಣ ನಾಮಾ
ಚಕ್ರೇ ಸದಷ್ಟಕಮಿದಂ ಪಠತಾ ಮ ಘಘ್ನಂ ।
ಧೀರೇಂದ್ರ ತೀರ್ಥ ಹೃದಯಾಮಲ ಮಂದಿರ ಸ್ಥಃ
ಪ್ರೀತೋಸ್ತ್ವನೇನ ಸುಸತಾಂ ಜನಕಾತ್ಮಜೇಶಃ ॥ ॥ ೯ ॥

ಇತಿ ವಾಯೀ ಗುರುರಾಜಾಚಾರ್ಯ ಸೂನು ಅಣ್ಣಾಚಾರ್ಯ ವಿರಚಿತಂ
॥ ಶ್ರೀ ಧೀರೇಂದ್ರಾಷ್ಟಕ ಸಂಪೂರ್ಣಮ್ ॥

- O -

## ಶ್ರೀ ಸುಶೀಲೇಂದ್ರತೀರ್ಥರ ಗುರುಗಳಾದ
## ಶ್ರೀ ಸುಕೃತೀಂದ್ರ ತೀರ್ಥರು, ನಂಜನಗೂಡು.



ಸುವಿದ್ವತ್ಕಮಲೋಲ್ಲಾಸ ಮಾರ್ತಾಂಡಂ ಸುಗುಣಾಕರಂ ।
ಸಚ್ಛಾಸ್ತ್ರ ಸಕ್ತ ಹೃದಯಂ ಸುಕೃತೀಂದ್ರ ಗುರುಂ ಭಜೇ ॥

## ಶ್ರೀ ಸುಶೀಲೇಂದ್ರತೀರ್ಥರು, ಹೊಸರಿತ್ತಿ



ಸುಧಾದ್ಯಮಲ ಸದ್ಬೋಧಂ ಸುಕೀರ್ತಿ ವಿಲಸದ್ದಿಶಂ ।
ಸುಧೀ ಸಂಸ್ತುತ್ಯ ಸುಗುಣಂ ಸುಶೀಲೇಂದ್ರ ಗುರುಂ ಭಜೇ ॥



ಶ್ರೀಮತ್ಸುಶೀಲೇಂದ್ರ ತೀರ್ಥ ಶ್ರೀಪಾದಂಗಳವರು

# ಶ್ರೀ ಸುಶೀಲೇಂದ್ರ ತೀರ್ಥರು

*(ಕ್ರಿ. ಶ. 1912 – 1926)*

ಶ್ರೀ ಮನ್ಮಧ್ವಾಚಾರ್ಯರ ಪರಂಪರೆಯ ಇತಿಹಾಸದಲ್ಲಿ 20ನೆಯ ಶತಮಾನದ ಎರಡು ದಶಕಗಳು ಸುವರ್ಣಾಕ್ಷರಗಳಿಂದ ಬರೆದಿಡುವ ಕಾಲವಾಗಿದೆ. ಈ ಕಾಲದಲ್ಲಿಯೇ ಶ್ರೀ ರಾಘವೇಂದ್ರ ಸ್ವಾಮಿಗಳವರ ಪೀಠದಲ್ಲಿ ವಿರಾಜಮಾನರಾದ ಶ್ರೀ ಸುಶೀಲೇಂದ್ರ ತೀರ್ಥರು ಮಧ್ವ ಜನಾಂಗವನ್ನು ಬಹು ವಿಧವಾಗಿ ಉದ್ಧರಿಸಿ ದ್ವೈತ ವಿಜಯ ದುಂದುಭಿ ಮೊಳಗಿಸಿದರು. ಸರ್ವಜ್ಞ ಸಿಂಹಾಸನದಲ್ಲಿ 14 ವರ್ಷ ವಿರಾಜಮಾನರಾಗಿ ಭಕ್ತರ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಎನಿಸಿದರು.

ಶ್ರೀ ಧೀರೇಂದ್ರ ತೀರ್ಥರ ನಂತರ ಬಂದ ಶ್ರೀ ಭುವನೇಂದ್ರ ತೀರ್ಥರು, ಶ್ರೀ ಸುಬೋಧೇಂದ್ರ ತೀರ್ಥರು, ಶ್ರೀ ಸುಜನೇಂದ್ರ ತೀರ್ಥರು, ಶ್ರೀ ಸುಜ್ಞಾನೇಂದ್ರ ತೀರ್ಥರು, ಶ್ರೀ ಸುಧರ್ಮೇಂದ್ರ ತೀರ್ಥರು ಶ್ರೀ ಸುಗುಣೇಂದ್ರ ತೀರ್ಥರು, ಶ್ರೀ ಸುಪ್ರಜ್ಞೇಂದ್ರ ತೀರ್ಥರು ಹಾಗೂ ಶ್ರೀ ಸುಕೃತೀಂದ್ರ ತೀರ್ಥರು. ಇವರ ಕರಸಂಜಾತರೇ ಶ್ರೀ **ಸುಶೀಲೇಂದ್ರ ತೀರ್ಥರು**.

## ವಂಶ ಜನನ

ಶ್ರೀ ಗುರುರಾಜರ ಪೂರ್ವಾಶ್ರಮದ ಗೌತಮ ಗೋತ್ರದಲ್ಲಿ ಈ ಮಹಾನುಭಾವರು ಜನಿಸಿದರು. ಪೂರ್ವಾಶ್ರಮದ ಹೆಸರು ಶ್ರೀ ಕೃಷ್ಣಾಚಾರ್ಯರು. ಶ್ರೀ ವೆಂಕಟರಾಘವೇಂದ್ರಾಚಾರ್ ಹಾಗೂ ಸರಸ್ವತಮ್ಮ ಸದಾಚಾರ ದಂಪತಿಗಳ ದ್ವಿತೀಯ ಪುತ್ರರಾಗಿ ಪ್ರಜೋತ್ಪತ್ತಿ ಸಂವತ್ಸರ ಮಾಘ ಕೃಷ್ಣ ಚೌತಿಯಂದು ಜನಿಸಿದರು. ಶ್ರೀ ವೇಣುಗೋಪಾಲಾಚಾರ್ ಅಣ್ಣಂದಿರು (ಶ್ರೀ ಸುಕೃತೀಂದ್ರ ತೀರ್ಥರು), ಶ್ರೀ ಸುಜ್ಞಾನೇಂದ್ರಾಚಾರ್ ತಮ್ಮಂದಿರು (ಶ್ರೀ ಸುಜಯೀಂದ್ರ ತೀರ್ಥರ ಪೂರ್ವಾಶ್ರಮ ತಂದೆ).

## ವಿದ್ಯಾಭ್ಯಾಸ

ಶ್ರೀ ಕೃಷ್ಣಾಚಾರ್ಯರು ಶ್ರೀ ಸುಪ್ರಜ್ಞೇಂದ್ರ ತೀರ್ಥರಲ್ಲಿ ಕಾವ್ಯ, ನಾಟಕ, ಅಲಂಕಾರ ಶಾಸ್ತ್ರ, ವೇದಾಂತಗಳನ್ನು ಅಧ್ಯಯನ ಮಾಡಿದರು. ಶ್ರೀ ಹುಲಿ ಹನುಮಂತಾಚಾರ್ಯರಲ್ಲಿ ನ್ಯಾಯಶಾಸ್ತ್ರವನ್ನೂ, ಅಣ್ಣಂದಿರಾದ ಶ್ರೀ ವೇಣುಗೋಪಾಲಾಚಾರ್ಯರಲ್ಲಿ ಸಮಗ್ರ ದ್ವೈತ ಸಿದ್ಧಾಂತವನ್ನೂ ಅಧ್ಯಯನ ಮಾಡಿ ಪ್ರಕಾಂಡ ಪಂಡಿತ ಜ್ಞಾನಿ ಎನಿಸಿದರು.

## ಗೃಹಸ್ಥಾಶ್ರಮ

ಶ್ರೀ ಹರಿ ಇಚ್ಛೆಯಂತೆ, ಶ್ರೀ ಕೃಷ್ಣಾಚಾರ್ಯರು ಗ್ರಹಸ್ಥಾಶ್ರಮವನ್ನು ಸ್ವೀಕರಿಸಿದರು. ಅವರ ಧರ್ಮಪತ್ನಿ ಸತ್ಯಭಾಮಾಬಾಯಿ. ಇವರಿಗೆ ಮಹಾಲಕ್ಷ್ಮೀ

ಎಂಬ ಒಬ್ಬ ಪುತ್ರಿ ಇದ್ದಳು. ಪದ್ಮಪತ್ರ ಜಲದಲ್ಲಿರುವ ಪರಿ ಸಂಸಾರದಲ್ಲಿದ್ದು ವೇದಾಂತದ ಅಧ್ಯಯನದಲ್ಲೇ ಹೆಚ್ಚಿನ ಕಾಲ ಕಳೆಯುತ್ತಿದ್ದರು. ವಿದ್ವತ್ ಸಭೆಗಳನ್ನು ಏರ್ಪಡಿಸುತ್ತ ತ್ರಿಮತಸ್ಥರಿಗೂ ಸಂಭಾವನೆಗಳನ್ನು ಗುರುಗಳಿಂದ ಕೊಡಿಸುತ್ತ ಗುರುಗಳಿಗೆ ಪ್ರೀತ್ಯಾಸ್ಪದರಾದರು. ವಿದ್ವತ್ ಪ್ರಪಂಚದಲ್ಲಿ ಮನೆ ಮಾತಾದರು.

## ಆಶ್ರಮ

ಶ್ರೀ ಸುಕೃತೀಂದ್ರ ತೀರ್ಥರು ನಿರ್ಯಾಣ ಕಾಲವು ಸಮೀಪಿಸುತ್ತಿರುವುದನ್ನು ಕಂಡು ಜ್ಞಾನ, ಭಕ್ತಿ, ವೈರಾಗ್ಯಾದಿ ಸದ್ಗುಣಗಳಿಂದ ಮನಸೂರೆಗೊಂಡ ಶ್ರೀ ಕೃಷ್ಣಾಚಾರ್ಯರಿಗೆ ಪರೀಧಾವಿ ಸಂವತ್ಸರ ಆಶ್ವೀಜ ಶುದ್ಧ ವಿಜಯದಶಮಿ (2-10-1912)ಯಂದು ಯತ್ಯಾಶ್ರಮವನ್ನಿತ್ತು ಶ್ರೀ ಸುಶೀಲೇಂದ್ರ ತೀರ್ಥರೆಂದು ನಾಮಕರಣ ಮಾಡಿ ನಂಜನಗೂಡಿನಲ್ಲಿಯೇ ಬೃಂದಾವನಸ್ಥರಾದರು. ವಿಜಯದಶಮಿಯಂದು ಪೀಠವೇರಿದ ಶ್ರೀ ಸುಶೀಲೇಂದ್ರ ತೀರ್ಥರು ಶ್ರೀಹರಿ ವಾಯು ಗುರುಗಳ ಅನುಗ್ರಹದಿಂದ ಸರ್ವತ್ರ ವಿಜಯವನ್ನೇ ಪಡೆದರು.

## ಪಾಠ ಪ್ರವಚನ

ಪ್ರಕಾಂಡ ಪಂಡಿತರಾಗಿದ್ದ ಗೌಡಗಿರಿ ವೆಂಕಟರಮಣಾಚಾರ್, ಮಠದ ಪಂಡಿತರಾದ ಹನುಮಂತಾಚಾರ್, ರಿತ್ತಿ ಗುರುವೆಂಕಟಾಚಾರ್ ಹಾಗೂ ನೆರೆದ ವಿದ್ವತ್ ಸಭಾದಲ್ಲಿ ಶಾಂತಿಪಾಠದಿಂದ ತತ್ವಪ್ರಕಾಶಿಕಾ, ಭಾವದೀಪ, ಭಾವರತ್ನಕೋಶ, ನಯದರ್ಪಣ ಮುಂತಾದ ಗ್ರಂಥಗಳನ್ನು ನಿರರ್ಗಳವಾಗಿ ಪೇಳುತ್ತಾ ವಿದ್ವದ್ ಜನರ ಮನವನ್ನು ಸೂರೆಗೊಂಡರು.

ಶ್ರೀ ಜಯತೀರ್ಥ ರಾಯರ ಶ್ರೀ ಮನ್ನ್ಯಾಯಸುಧಾ ಗ್ರಂಥದ ಗಾಂಭೀರ್ಯ ಮಹಿಮೆಗಳನ್ನು ಸಾರವತ್ತಾಗಿ ಬಿತ್ತರಿಸುತ್ತಿರುವ ಶ್ರೀಗಳವರನ್ನು ಕಂಡಾಗ ಸರ್ವಜ್ಞ ಪೀಠದ ಮಹಿಮೆ ಎಂದು ನೆರೆದ ಪಂಡಿತರು ಹರ್ಷೋದ್ಗಾರ ಗೈಯುತ್ತಿದ್ದರು.

ಶ್ರೀ ಸಮೀರ ಸಮಯ ಸಂವರ್ಧಿನೀ ಸಭಾವನ್ನು ಪ್ರತಿ ವರ್ಷವೂ ನಡೆಸುತ್ತಾ ತ್ರಿಮತಸ್ಥ ಪಂಡಿತರಿಗೆ ವಿಶೇಷ ಗೌರವವನ್ನು ಸಲ್ಲಿಸುತ್ತ 'ಸಭಾಸ್ವಾಮಿಗಳು' ಎಂದೇ ಖ್ಯಾತಿ ಪಡೆದರು.

ಮಂತ್ರಾಲಯ, ನಂಜನಗೂಡು ಮುಂತಾದೆಡೆ ಪಾಠಶಾಲೆಗಳನ್ನು ನಿರ್ಮಿಸುತ್ತ ಶ್ರೀ ಮಧ್ವ ಸಿದ್ಧಾಂತ ಮೂಲ ತತ್ವಗಳನ್ನು ಶಾಸ್ತ್ರ ಹಂಬಲ ಉಳ್ಳವರಿಗೆ ಉಣಬಡಿಸಿ ಪಂಡಿತರನ್ನಾಗಿ ಮಾಡಿದರು. ಅವರಲ್ಲಿ ಗುನ್ನಾಳು ರಾಘವೇಂದ್ರಾಚಾರ್, ಆರಣಿ ವಾಸುದೇವಾಚಾರ್, ಶ್ರೀಪತಿಆಚಾರ್, ಶ್ರೀ ವೆಂಕಟರಮಣಾಚಾರ್, ಭೀಮಾಚಾರ್, ಶ್ರೀ ಅರ್ಚಕ ವೇದವ್ಯಾಸಾಚಾರ್, ದುರ್ಗದ ಶ್ರೀ ಕೃಷ್ಣಾಚಾರ್, ದುರ್ಗದ ಭೀಮಾಚಾರ್ಯ, ಪುರಾಣಿಕ ರಾಘವೇಂದ್ರಾಚಾರ್, ಶ್ರೀ ಗುಂಜಳ್ಳಿ ಶ್ರೀನಿವಾಸಾಚಾರ್, ಮೊದಲಾದವರು ಶ್ರೇಯಸ್ಸನ್ನು ಸಂಪಾದಿಸಿದರು.

ಗೌಡಗಿರಿ ವೆಂಕಟರಮಣಾಚಾರ್ಯರು 'ಚಂದ್ರಿಕಾಖಂಡನ' ಗ್ರಂಥಕ್ಕೆ ಖಂಡನೆ ಚಂದ್ರಿಕಾ ಪ್ರಕಾಶ ಪ್ರಸರ ಗ್ರಂಥ ಬರೆದು ಗುರುಗಳಿಗೆ ತೋರಿಸಿದಾಗ ಶ್ರೀಗಳವರು ಹರುಷದಿಂದ ಸಂಭಾವನೆ ಇತ್ತು ಗ್ರಂಥ ಪ್ರಕಟನೆಗೆ ಆಶೀರ್ವದಿಸಿದರು.

## ಶ್ರೀಮತಸ್ಥರಿಗೆ ಸನ್ಮಾನ

ಶ್ರೀಮತಸ್ಥ ಪಂಡಿತರಿಗೆ ವಿಶೇಷ ಸಂಭಾವನೆ ಇತ್ತು ಪೋಷಿಸುತ್ತಿದ್ದರು. ಅವರಲ್ಲಿ ಮುಖ್ಯರಾದವರು :

(1) ಕುಂಭಕೋಣದ ಕಾಪೆ ರಾಮ ಚಂದ್ರಾಚಾರ್,
(2) ಗಲಗಲಿ ರಾಮಾಚಾರ್, (3) ಗಲಗಲಿ ಪಾಂಡುರಂಗಾಚಾರ್,
(4) ಪುಂಗನೂರು ರಾಘವೇಂದ್ರಾಚಾರ್
(5) ಗೌಡಗಿರಿ ವೆಂಕಟರಮಣಾಚಾರ್ (6) ವೈಯೂರೀ ಶ್ರೀನಿವಾಸಾಚಾರ್
(7) ಗಜೇಂದ್ರಗಡಕರ ಪೂರ್ಣಪ್ರಜ್ಞಾಚಾರ್
(8) ವ್ಯಾಕರಣ ಸೇತುಮಾಧವಾಚಾರ್
(9) ಶ್ಯಾಮಾಚಾರ್ (10) ನೆರೂರು ಕೃಷ್ಣಾಚಾರ್
(11) ದೊಡ್ಡಬಳ್ಳಾಪುರ ಗೋವಿಂದಾಚಾರ್
(12) ವಾಸುದೇವಾಚಾರ್ (13) ಧಡೇ ಸೂಗೂರು ವೆಂಕೋಬಾಚಾರ್
(14) ಮಧುರೆ ವೇದವ್ಯಾಸ ಆಚಾರ್ಯ (15) ಅಂಬಲಿ ಶ್ರೀನಿವಾಸ ಆಚಾರ್ಯ
(16) ಅಂಡಕೋವಿಲ್ ದೇವ ಆಚಾರ್.

ಮೊದಲಾದವರೆಲ್ಲ ಹೆಸರುವಾಸಿಯಾಗಿದ್ದರು.

## ಶ್ರೀ ಗುರುರಾಜರ ಸೇವೆ

ಶ್ರೀಗಳವರು ಮಂತ್ರಾಲಯದಲ್ಲೇ ನೆಲೆಸುತ್ತ ಗುರುರಾಜರ ಸೇವೆಗೈಯುತ್ತ ನಾನಾ ಉತ್ಸವಗಳನ್ನು ನೆರವೇರಿಸುತ್ತಿದ್ದರು. ಭಕ್ತರ ಅನುಕೂಲಕ್ಕಾಗಿ ವಸತಿಗೃಹ, ಭೋಜನ ಸೌಕರ್ಯಗಳನ್ನು ಏರ್ಪಡಿಸಿದರು. ಮಠಕ್ಕೆ ಸುತ್ತುವರೆದು ಶಿಲಾಮಂಟಪವನ್ನು ನಿರ್ಮಿಸಿದರು. ಮಂತ್ರಾಲಯ ರಾಯರ ಮಹಿಮೆ ಭಕ್ತರ ಮನ ಮುಟ್ಟುವಂತೆ ಮಾಡಿದರು. ವರಹಜೆ ತೀರದ ಮಂತ್ರಾಲಯ ಸುರಪಾಲಯದಂತೆ ಕಂಗೊಳಿಸುತ್ತಿತ್ತು.

## ದಿಗ್ವಿಜಯ ಯಾತ್ರೆ

ದಕ್ಷಿಣ ಭಾರತದಾದ್ಯಂತ ದಿಗ್ವಿಜಯಗೈಯುತ್ತ ಮಧ್ವ ತತ್ವಗಳನ್ನು ಪ್ರಚಾರಗೈಯುತ್ತ ವಿದ್ವತ್ ಸಭೆಗಳನ್ನು ಏರ್ಪಡಿಸುತ್ತ ಶ್ರೀ ಗುರುರಾಜರ 'ಚಲಪ್ರತಿಯಾ ಸ್ಥಾನಾಪನ್ನ'ರೆಂದು ಖ್ಯಾತಿ ಪಡೆದರು. ಮೂಲರಾಮನಿಗೆ ಸುವರ್ಣ ಮಂಟಪವನ್ನು ನಿರ್ಮಿಸಿ, ಅದರಲ್ಲಿ ಪೂಜಿಸಿ ಆನಂದಿಸಿದರು.

ಶ್ರೀಕೃಷ್ಣ ದರ್ಶನ ಆಕಾಂಕ್ಷಿಗಳಾಗಿ, ಶ್ರೀಗಳವರು ಉಡುಪಿಗೆ ದಯಮಾಡಿಸಲು ಅಷ್ಟಮಠದ ಯತಿವರ್ಯರು ಸಂಭ್ರಮದಿಂದ ಬರಮಾಡಿಕೊಂಡರು. ಶ್ರೀಕೃಷ್ಣನಿಗೆ ವಿಶೇಷ ಪೂಜೆ ಸಲ್ಲಿಸುತ್ತ, ಪೂರ್ವದಲ್ಲಿ ಶ್ರೀ ವಾದಿರಾಜರು ಶ್ರೀ ವಿಜಯೀಂದ್ರ

ತೀರ್ಥರಿಗೆ ನೀಡಿದ ಸ್ಥಳದಲ್ಲಿ ಶ್ರೀ ಕೃಷ್ಣನಿಗೆ ಎದುರಾಗಿ ಶ್ರೀ ಗುರುರಾಜರ ಬೃಂದಾವನವನ್ನು ಪ್ರತಿಷ್ಠಾಪಿಸಿದರು. ಶ್ರೀಗಳವರು ಇದಕ್ಕೆಲ್ಲ ಶ್ರೀ ಗುರುರಾಜರ ಅನುಗ್ರಹವೆಂದೇ ಘಂಟಾಘೋಷವಾಗಿ ಹೇಳುತ್ತಿದ್ದರು.

ಭಕ್ತರೊಬ್ಬರು ಬರೆದ 'ಶ್ರೀ ಅಭಿನವ ರಾಘವೇಂದ್ರ ಚರಿತ್ರೆ' ಗ್ರಂಥವನ್ನು ಶ್ರೀಗಳವರಿಗೆ ಅರ್ಪಿಸಲು ಅದನ್ನು ನದಿಗೆ ಅರ್ಪಿಸಲು ಸೂಚಿಸಿದರು. ಸ್ವ-ಪ್ರಚಾರಕ್ಕೆ ಎಂದೂ ಕಿವಿಗೊಡುತ್ತಿರಲಿಲ್ಲ.

ಈ ಎಲ್ಲ ಕಾರಣಗಳಿಂದಲೇ ದ್ವೈತಸಿದ್ಧಾಂತ ಸ್ಥಾಪಕ, ವಾದಿ ಗಜಸಿಂಹ, ವಿದ್ವತ್ ಚಕೋರ ಚಂದ್ರಮರು, ಶ್ರೀ ಗುರುರಾಜರ ಚಲಪ್ರತಿಮಾ ಸ್ಥಾನೀಯರೂ, ಅನ್ನದಾನ ಪ್ರಭುಗಳು, ಲೋಕ ಕಲ್ಯಾಣ ಧುರಂಧರರೆಂದು ಜನರಿಂದ ಸ್ತುತ್ಯರಾಗಿದ್ದರು.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಕಡಲಬಾಳು ಗ್ರಾಮದಲ್ಲಿ ಶ್ರೀಗಳವರು 1914ರಲ್ಲಿ ರಾಯರ ಸಮ್ಮುಖ ಮಂಟಪದಲ್ಲಿ ಶ್ರೀ ವೇಣುಗೋಪಾಲ, ಮಾರುತಿ, ಶೇಷ ಹಾಗೂ ರುದ್ರ ದೇವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದರು.

## ಅಂತ್ಯಕಾಲ

ಶ್ರೀಗಳವರು 14 ವರ್ಷ ದಿಗ್ವಿಜಯ ಸಿಂಹಾಸನದಲ್ಲಿ ವಿರಾಜಮಾನರಾಗಿ ಸಂಚಾರತ್ವೇನ ಶ್ರೀ ಧೀರೇಂದ್ರ ತೀರ್ಥರ ಸನ್ನಿಧಿ ಹೊಸರಿತ್ತಿಗೆ ಆಗಮಿಸಿದರು. ಅವತಾರದ ಕಾಲ ಸಮಾಪ್ತಿಯನ್ನರಿತು ಶ್ರೀ ದುರ್ಗದ ಕೃಷ್ಣಾಚಾರ್ಯರಿಗೆ (ಪೂರ್ವಾಶ್ರಮದ ಸೋದರತ್ತೆ ಮಗ) ಪರಮ ಹಂಸಾಶ್ರಮವನ್ನಿತ್ತು ಶ್ರೀ ಸುವ್ರತೀಂದ್ರ ತೀರ್ಥರೆಂದು ನಾಮಕರಣ ಮಾಡಿ, ಅಕ್ಷಯ ಸಂವತ್ಸರ ಆಷಾಢ ಶುಕ್ಲ ತದಗಿಯಂದು ಅವತಾರ ಸಮಾಪ್ತಿಗೊಳಿಸಿದರು.

ಶ್ರೀ ಸುವ್ರತೀಂದ್ರ ತೀರ್ಥರು ಬೃಂದಾವನ ಪ್ರತಿಷ್ಠಾಪನ ಮಾಡಿಸಿ, ಬೃಂದಾವನಕ್ಕೆ ಕುಂಭ ಅಭಿಷೇಕ ಮಾಡಿ, ಈ ಮೂಲರಾಮನ ವಿಗ್ರಹವನ್ನು ಇಟ್ಟು ಕನಕಾಭಿಷೇಕ ಮಾಡಿ ಹಸ್ತೋದಕವನ್ನು ಸಮರ್ಪಿಸಿ, ಚರಮಶ್ಲೋಕ ರಚಿಸಿ, ಗುರುಗಳನ್ನು ಕೊಂಡಾಡಿದರು.

1935ರಲ್ಲಿ ಬಳ್ಳಾರಿ ಮಹಾಸಮಾರಾಧನೆ ಕಾಲದಲ್ಲಿ ಶ್ರೀ ಸುಯಮೀಂದ್ರ ತೀರ್ಥರು ಭಕ್ತರ ಇಚ್ಛೆಯಂತೆ ಬಳ್ಳಾರಿ ಸಮೀಪದ ಅಲ್ಲೀಪುರದಲ್ಲಿ ಶ್ರೀ ಸುಶೀಲೇಂದ್ರ ತೀರ್ಥರ ಮೃತ್ತಿಕಾ ಬೃಂದಾವನವನ್ನು ಪ್ರತಿಷ್ಠಾಪಿಸಿರುತ್ತಾರೆ. ಶ್ರೀ ಸುಶೀಲೇಂದ್ರ ತೀರ್ಥರ ಮಹಿಮೆಯನ್ನು ಹರಿದಾಸರ ಮುಖದಿಂದಲೇ ಹೊರಟ ಕೀರ್ತನೆಗಳನ್ನು ಕೇಳಿದಾಗ ಗುರುಭಕ್ತಿ ಇನ್ನೂ ಅಧಿಕವಾಗುವುದರಲ್ಲಿ ಸಂದೇಹವಿಲ್ಲ.

ಸುಧಾದ್ಯಮಲ ಸದ್ಬೋಧಂ ಸುಕೀರ್ತಿ ವಿಲಸದ್ದಿಶಂ ।
ಸುಧೀ ಸಂಸ್ತುತ್ಯ ಸುಗುಣಂ ಸುಶೀಲೇಂದ್ರ ಗುರುಂ ಭಜೇ ॥

# ಶ್ರೀಗುರು ಸುಶೀಲೇಂದ್ರ ತೀರ್ಥರ ಸ್ತುತಿಗಳು

## 1. ಗುರು ಸುಶೀಲೇಂದ್ರರ ಚರಣ

ರಾಗ – ರೇ ಗುಪ್ತಿ ತಾಳ – ಆದಿ

ಗುರು ಸುಶೀಲೇಂದ್ರರ ಚರಣವಾರಿಜಯುಗ್ಮ ।
ಸ್ಮರಿಸುವ ನರರು ಶ್ರೀ ಹರಿದಾಸರೂ ॥ ॥ ಪ ॥

ಹರಿವರ ಸುಮತಾಬ್ಧಿ ಹರಿಣಾಂಕರೆನಿಸಿದ
ವರ ಸುಕೃತೀಂದ್ರ ತೀರ್ಥರ ಕರಕಮಲಜ ॥ ॥ ಅ.ಪ ॥

ಕಡೆಯ ಆಶ್ರಮವ ಕೈಕೊಂಡು ಮಾಸತ್ರಯದಿ ।
ಸಡಗರದಲಿ ಮಹಾಸಭೆ ನಿರ್ಮಿಸಿ ।
ಪೊಡವಿಯೊಳಿದ್ದ ಭೂಸುರರಾಜ್ಞಾ ಪತ್ರದಿ ಬರ ।
ಮಾಡಿ ವಿದ್ವಾಂಸರೊಡಗೂಡಿ ಮಧ್ವಾಗಮವನು ।
ನೋಡಿ ಬೆಲೆಯುಳ್ಳ ವೆಗ್ಗಳ ಒಡಿವೆ ।
ಉಡುಪುಗಳನ್ನು ಕರುಣಿಸಿ ಮೃಷ್ಟಾನ್ನ ದ್ವಿಜರಿಗೆ ।
ಕಡು ಸುಪ್ರೇಮದಿ ಸಲಿಸಿ ಮುದ ಬಡಿಸಿ ।
ಜಡ ಕುಮಾಯಿಗಳ ಗಡಣ ಜಡಧಿಗೆ ।
ವಡವ ತಾನೆನಸಿ ಕ್ರೋಡಜಾ ಸ್ಥಿತ ।
ಒಡೆಯ ಶ್ರೀ ಗುರು ರಾಘವೇಂದ್ರರ ಅಡಿಗಳಬ್ಜ ಕಾ ।
ರಡಿ ಯಂತೋಪ್ಪುತ ಬಿಡದೆ ಸಂತತ ದೃಢದಿ ಸೇವಿಸಿ ।
ಜಡಜ ಜಾಂಡದಿ ಮೆರೆದ ಅಸ್ಮದ್ ॥ ॥ ೧ ॥

ಮರುತಾಂತರ್ಗತ ಮೂಲ ತರುಣಿ ಕುಲೇಂದ್ರನ ।
ಕರುಣ ವೆಷ್ಟಿವರೋಳು ಅರುಹಲಾರೆ ।
ವರ ರೌಪ್ಯಾಸನ ಪುರಕೆ ।
ಎರಡಾರು ಯತಿಗಳ ಮತಿಯಿಂದ ತಮ್ಮಯ ಶಿಷ್ಯತತಿಯಿಂದ ಬಹುವಿಧ।
ಬಿರುದಾವಳಿಯಿಂದ ।
ತೆರಳಿ ಶಶಿರದಿ ವರಸುವಾದ್ಯ ದ್ವಾನ ಮೊಳಗಿಸುತ ಘನಭಕ್ತಿ ।
ಪರವಶರಾಗಿ ಸುರಚಿರ ಕನಕಮಣಿ ಧನತಮನ ।
ತ್ವರಿತ ತೃಣ ಬಗೆದು ದೇವಕಿ ತರಳ ರುಕ್ಮಿಣಿ ವರ ಮುರಾಂತಕ ।

ಚರಣಕರ್ಪಿಸುತ ಆನಂದ ಬಡುತ ।
ಸರ್ವಮುನಿ ಜನಗಳಿಗೆ ಬಲು ಉಪಚರಿಸಿ, ಮನ್ನಣೆಧರಿಸಿ ।
ಹರುಷದಿ ವರ ಸುಧೀಂದ್ರರ ಕರಜರನು ।
ನೆರೆ ಸ್ಥಾಪಿಸಿದ ಆಶ್ಚರ್ಯ ಚರಿತ ॥ ॥ ೨ ॥

ಕ್ಷಿತಿಯೊಳು ಭಾರತಿ ಪತಿ ಶ್ರುತಿ ಶಾಸ್ತ್ರಾರ್ಥ ।
ಚತುರ ನದಿ ಪಡೆದು ।
ವಿತತ ಮಹಿಮನಾದ ಪತಿತಪಾವನ ಶ್ಯಾಮಸುಂದರನ ।
ಸ್ತುತಿಸುತೆ ಲಯ ಚಿಂತನ ನೈಯುತ ಶ್ರೀಯುತ ಸಂಸ್ಥಾನಾ ।
ಮತಿ ವಿಶಾರದರಾದ ವರ ಸು ।
ವ್ರತೀಂದ್ರ ತೀರ್ಥರಿಗೆ ಹಿತದಿಂದ ಲೊಪ್ಪಿಸಿ ।
ಯತಿ ಧೀರೇಂದ್ರರ ಚಾರುಸ್ಥಳ ದೊಳಗೆ, ತನು –
ವಿತ್ತು ಪರಿಪುರ ಪಥವ ಪಿಡಿದ್ಯೆದಿದರು ಚೆನ್ನಾಗಿ ಸೇವಿಪ –
ಜನರಿಗೆ ।
ಅತಿ ದಯದಿ ಮನೋರಥವ ನೀಡುತ ।
ಸತತ ಮಾಣದೆ ಪರಮ ಭಕುತಿಯಲಿ ।
ಪೃಥಿವಿ ಸುರಕರ ಶತ ಪತ್ರಗಳಿಂದ ।
ನುತಿಸಿ ಗೊಳುತರ್ಚನೆಯ ಗೊಂಬ ॥ ॥ ೩ ॥

-೦-

## 2. ಚಂದ್ರನ ನೋಡಿರೈ

ರಾಗ – ಆನಂದ ಭೈರವಿ ತಾಳ – ಆದಿ

ಚಂದ್ರನ ನೋಡಿರೈ । ಶ್ರೀ । ಸುಶೀಲೇಂದ್ರನ ಪಾಡಿರೈ ।
ವಂದಿಪ ಸುಜನ ಮಂದಾರ ಮಾಘದ ವಿರೋಧಿ ಸುಮತ –
ಪಯೋಧಿ ॥ ॥ ಪ ॥

ಯತಿಕುಲವರ ಸುಕೃತೀಂದ್ರ ಕರಾಂಬುಜ ಜಾತ । ಜಿತಮನೋಜಾತ।
ಪೃಥಿವಿ ಸುರಾರ್ಚಿತ ಪತಿತ ಮತಾರಣ್ಯಜಾತ । ವೇದಸನೀತ ।
ಕ್ಷಿತಿ ಪತಿ ಸುತೆ ತಟಸ್ಥಿತ ಶ್ರೀರಾಯರ ಚರಣ । ನಳಿನ ಷಟ್ಚರಣ ।
ಅತಿಶಯ ವಿಭವದಿ ಜಗದಿ ಮೆರೆದ ರವಿತೇಜ । ಕುಜನ ಸರೋಜ
॥ ೧ ॥

ವರದಾ ಕೂಲದಿ ಪರಿಶೋಭಿಪ ರಿತ್ತಿಗ್ರಾಮ । ಕೃತ ನಿಜಧಾಮ ।
ಗುರುವರೇಣ್ಯ ಧೀರೇಂದ್ರರ ಪೂರ್ಣ ಸುಪ್ರೇಮ । ಪಡೆದ ಸನ್ಮಹಿಮ।
ಪರಿಮಳ ಸುಧಾ ನ್ಯಾಯಾಮೃತ ತತ್ವದ ಸಾರ । ವರಿತ ಗಂಭೀರ ।
ಧರಣೆ ಸುರಾಗ್ರಣಿ ಸುವ್ರತೀಂದ್ರರ ಹೃತ್ಕುಮುದ । ಸುಮನ ಶರತರಿದ
॥ ೨ ॥

ಅಕ್ಷಯ ವತ್ಸರಾಷಾಢ ಸುಸಿತ ಪಕ್ಷದಲಿ । ತಿಥಿ ತೃತಿಯದಲಿ ।
ಲಕ್ಷವಿಟ್ಟು ಲಯ ಚಿಂತನೆ ಗೈದ್ಧುರುಷದಲಿ । ಸುಸ್ವಾಂತದಲಿ ।
ತ್ರ್ಯಕ್ಷವಿನುತ ಶ್ಯಾಮಸುಂದರ ನಂಘ್ರಿ ಧ್ಯಾನಿಸುತ । ಕ್ಷೋಣಿತ್ಯಜಿಸುತ।
ಸಾಕ್ಷಾನ್ಮೋಕ್ಷ ಸುಸ್ಥಾನಕೆ ತೆರಳಿದ ಧೀರಾ । ಭಕ್ತ ಚಕೋರ ॥
॥ ೩ ॥

–O–

## 3. ಪೊಂದಿ ಭಜಿಸು

ರಾಗ – ಯದುಕುಲ ಕಾಂಬೋಧಿ ತಾಳ – ಆದಿ

ಪೊಂದಿ ಭಜಿಸು ಸುಶೀಲೇಂದ್ರರ ಪದನಿರುತ
ಮಂದ ಮಾನವ ತ್ವರಿತ ।
ವೃಂದಾರಕ ಸದ್ವಂಶ ಜರಿವರೆನುತ
ಮನ ದೊಳು ಭಾವಿಸುತ ॥ ॥ ಪ ॥

ಗುರು ಸುಕೃತೀಂದ್ರಕರ ಕಮಲದಿ ತಾನು । ತುರಿಯಾಶ್ರಮವನ್ನು ।
ಧರಿಸುತಲ್ಧುರುಷದಿ ರಘುಕುಲ ಜನ ಚರಣ । ಆರಾಧಿಸಿದ ಘನ್ನ ।
ಮರುತಾಗಮ ಮರ್ಮಜ್ಞನು ತಾನಾಗಿ । ಮೆರೆದನು ಚೆನ್ನಾಗಿ ॥೧॥

ವರಹಜ ನದಿ ವಾಸರ ವಲಿಮೆಯಲಿ । ಧರೆಯಲಿ ಚರಿಸುತಲಿ ।
ಪರವಾದಿಯ ಮತ ಜರಿಯುತ ವೈಷ್ಣವರ । ಉದ್ಧರಿಸಿದ ಧೀರಾ ।
ನರ ರೆಂದಿವರನು ನಿಂದಿಸುವನೆ ದೈತ್ಯ । ನಾ ಪೇಳುವೆ ಸತ್ಯ ॥೨॥

ಶ್ರೀ ಮನೋ ವಲ್ಲಭ ಶ್ಯಾಮ ಸುಂದರನ । ನಾಮವ ಪ್ರತಿದಿನ ।
ನೇ ಮದಿ ಪಠಿಸುತ ಪ್ರೇಮದಿ ಶಿಷ್ಯರನ । ಸಲಹಿದ ಸಂಪನ್ನ ।
ಧೀಮಜ್ಜನ ಸಂಸೇವಿತ – ಸುವೃತೀಂದ್ರ । ಹೃತ್ಕುಮುದಕೆ ಚಂದ್ರ॥
॥೩॥

–೦–

## 4. ವರ್ಣಿಸಲು ಸಾಧ್ಯವೇ ಧರೆಯೊಳಿನ್ನು

ರಾಗ – ಕಾಂಬೋಧಿ ತಾಳ – ಝಂಪೆ

ವರಣಿಸಲು ಸಾಧ್ಯವೇ ಧರೆಯೊಳಿನ್ನು ।
ಗುರುವರಿಯ ಸುಶೀಲೇಂದ್ರ ತೀರ್ಥರ ಮಹಿಮೆಯನು ॥ ಪ ॥

ಭಾನು ನಂದನ ನಂತೆ ದೀನ ಮಾನವರಿಗೆ ।
ಸಾನುರಾಗದಿ ಕೊಡುವೋದಾನ ನೋಡಿ ॥
ಏನು ಹೇಳಲಿ ದಿವಿಜ ಧೇನು ಭೂರುಹ ಮಣಿ ।
ಕ್ಷೋಣಿಯೊಳು ಜಡ ಪಶುರೂಪ ತಾಳಿದವು ॥ ॥ ೧ ॥

ಪರ ಮಠಾಧೀಶರು ಪರಿಪರಿಯ ಲಿಂದಿವರ ।
ಪರಮ ಔದಾರ್ಯ ಗುಣ ಪರಕಿಸುತಲಿ ॥
ಬೆರಳು ಕಚ್ಚುತಲಿ ಬೆರಗಾಗಿ ಜಗದೊಳಗೆ ।
ಸರಿಯಿವರಿ ಗಿಲ್ಲೆಂದು ಶಿರದೂಗಿ ಹೊಗಳಿದರು ॥ ॥ ೨ ॥

ಧೀಮಂತ ಜನರೊಡಿಯ ಶ್ರೀಮಂತ್ರ ಮಂದಿರದ ।
ಸ್ವಾಮಿಗಳ ಪೂರ್ಣ ಪ್ರೇಮ ಪಡೆದು ।
ತಾಮರಸ ಭವ ಪೂಜ್ಯ ಶ್ಯಾಮಸುಂದರ ಮೂಲ ।
ರಾಮ ಮೂರುತಿಯನ್ನು ಭೂಮಿಯೊಳು ಮೆರೆಸಿದರು ॥ ॥ ೩ ॥

–O–

## 5. ವರದಾ ತೀರದಿ ನೆಲಸಿಹ

ತಾಳ – ತ್ರಿತಾಲ

ರಾಗ – ಭೂಪ

ವರದಾ ತೀರದಿ ನೆಲಸಿಹ ಗುರುವರನ್ಯಾರೆ । ಪೇಳಮ್ಮಯ್ಯ ॥ ಪ ॥

ವರದಾಯಕ ಶ್ರೀ ರಾಘವೇಂದ್ರರ ಕರುಣ ಪಡೆದ ಸುಶೀಲೇಂದ್ರ
ಮುನಿಪನೆ ॥ ಅ.ಪ. ॥

ದರಪೋವಿವ ಕಂದರದಿ ತುಲಸಿ ಮಣಿಹಾರಾ । ಪೇಳಮ್ಮಯ್ಯಾ ।
ಅರ ಶಶಿಸಮ ಸುವಿಶಾಲ ಫಾಲದಲಿ ತಿಲಕಾ । ಪೇಳಮ್ಮಯ್ಯಾ ।
ಸುರಚಿರ ದ್ವಾದಶ ನಾಮ ಊರ್ಧ್ವ ಪುಂಡ್ರಗಳು । ಪೇಳಮ್ಮಯ್ಯಾ ।
ಧರಸಿ ಧರಣಿಯೊಳು ಪರಿಪರಿವಿಭವದಿ ।
ಮೆರೆದ ಕರುಣಿವರ ಪುಣ್ಯ ಪುರುಷನೆ ॥ ॥ ೧ ॥

ತನು ಮನ ಧನ ವನಿತಾದಿ ವಿಷಯ ವಿರಹಿತನು । ಪೇಳಮ್ಮಯ್ಯಾ ।
ತನುರಹಿತನ ಮಾರ್ಗಣ ತೃಣ ಸಮವೆಣಿಸಿಹನು । ಪೇಳಮ್ಮಯ್ಯಾ ।
ಅನಿಲ ಸುಶಾಸ್ತ್ರವ ಘನಮನದಲಿ ಪಠಿಸುವನು । ಪೇಳಮ್ಮಯ್ಯಾ ।
ಅನಿಮಿಷ ಲೋಚನೆ ಅನುಮಾನಿಸದಿರು ।
ಅನಿಮಿಷಾಂಶ ರಿವರನು ದಿನ ಸೇವಿಸು ॥ ॥ ೨ ॥

ಯತಿ ಶಿರೋಮಣಿ ಧೀರೇಂದ್ರರ ಹಿತಕತಿ – ಪಾತ್ರ । ಪೇಳಮ್ಮಯ್ಯಾ ।
ಅತುಳ ಮಹಿಮ ಸುಕೃತೀಂದ್ರ ತೀರ್ಥರಿಗೆ ಪುತ್ರ । ಪೇಳಮ್ಮಯ್ಯಾ ।
ಕ್ಷಿತಿ ಸುರ ನುತ ಸುವೃತೀಂದ್ರ ಹೃದಯ ಶತ ಪತ್ರ । ಪೇಳಮ್ಮಯ್ಯಾ ।
ಸತತ ರವಿ ಯನಿಸಿ ಶ್ಯಾಮ ಸುಂದರನ ।
ಅತಿಶಯ ಭಕುತಿಲಿ ಸ್ತುತಿಪ ಸುಗುಣ ನಿಧಿ ॥ ॥ ೩ ॥

–o–

# 6. ದಾನಿಗಳೊಳು ಪ್ರತಿಗಾಣೆನೊ

ರಾಗ – ಧನ್ಯಾಸಿ

ತಾಳ – ತ್ರಿವಿಡಿ

ದಾನಿಗಳೊಳು ಪ್ರತಿಗಾಣೆನೊ ನಿನಗೆ । ಸ– । ಸ್ವಾಮಿ
ಶ್ರೀ ಸುಶೀಲೇಂದ್ರ ॥
ನೀನೆವೆ ಗತಿಯೆಂದ ದೀನರ ಮನೋಭೀಷ್ಟ ।
ಸಾನು ರಾಗದಿ ಕೊಡುವಿ । ಕೈಪಿಡಿಯುವಿ ॥ ॥ ಪ ॥

ಶ್ರೀ ಸುಕೃತೀಂದ್ರ ಸಂಯಮಿಗಳಿಂದಲಿ । ಸಂ –
ನ್ಯಾಸತ್ವ ಸ್ವೀಕರಿಸಿ ।
ಭೂಸುತೆ ಪತಿ ಮೂಲ ದಾಶರಥಿಯ ಪಾದ
ಲೇಸಾಗಿ ವಲಿಸಿದಿ ನೀ । ಸುಜ್ಞಾನಿ ॥ ॥ ೧ ॥

ಕರಿ ವರದನ ಪೂರ್ಣ ಕರುಣ ಪಡೆದು ದಿವಾ –
ಕರನಂತೆ ರಾಜಿಸುತ ।
ಗುರು ರಾಘವೇಂದ್ರಾಖ್ಯ ಸುರಧೇನುವಿಗೆ ಪುಟ್ಟ ।
ಕರು ವೆನಿಸುತ ಮೆರದಿ । ಭೂವಲಯದಿ ॥ ॥ ೨ ॥

ಮೋದ ತೀರ್ಥಾಗಮ ಸಾಧು ಸಜ್ಜನರಿಂದ
ಶೋಧಿಸಿ ಬಹು ವಿಧದಿ ।
ಮೇದಿನಿಯೊಳು ಪಂಚ ಭೇದ ಶಿಷ್ಯರಿಗೆಲ್ಲ ।
ಬೋಧಿಸುತಲಿ ಪೊರದಿ । ದಯಾಂಬುಧಿ ॥ ॥ ೩ ॥

ಮಂದಾಕಿನಿಗೆ ಸಮವೆಂದೆನಿಸುವ ವರದ ।
ಸಿಂಧು ತೀರದಿ ನೆಲಸಿ ।
ಮಂದಾರ ಕುಜದಂತೆ ಮಂದ ಜನರಿಗೆ ಕ –
ರ್ಮಂದಿಪ ವರಗಳನು । ನೀಡುವಿ ನೀನು ॥ ॥ ೪ ॥

ಶ್ರೀ ಶ್ಯಾಮ ಸುಂದರ ವಿಠ್ಠಲ ವಾಸಿಸುವ ।
ರೌಪ್ಯಾಸನ ವರಕ್ಷೇತ್ರದಿ ।
ದೇಶ ದೇಶದಿ ಬಂದ ಭೂಸುರರಿಗೆ ಧನ
ರಾಶೆ ಸೂರೆ ಮಾಡಿದೆ ಸನ್ಮೋದಿ ॥ ॥ ೫ ॥

-O-

## 7. ವಶವಲ್ಲ ವರ್ಣಿಸಲು

ರಾಗ – ರೇಗುಪ್ತಿ ತಾಳ – ಝಂಪೆ

ವಶವಲ್ಲ ವರ್ಣಿಸಲು ಸುಶೀಲೇಂದ್ರ ತೀರ್ಥರ ।
ಅಸದೃಶದ ಮಹಿಮೆಗಳನು ॥ ॥ ಪ ॥

ಬಿಸಜ ಸಖ ಕಿರಣ ತೆರೆ ವಸುಧಿ ತಳ ದೊಳಗಿವರ
ಸುಶಿತ ಸತ್ಕೀರುತಿಯು ಪಸರಿಸಿರುವುದು ಘನ್ನ ॥ ॥ ಅ.ಪ. ॥

ಭಾವ ಭಕುತಿಲಿ ಯಿವರ ಸೇವಿಸುವ ನರರಿಗೆ ।
ಆವಾವ ಭಯವಿಲ್ಲವೋ ॥
ಗೋ ವತ್ಸ ನ್ಯಾಯದಲಿ ತಾವೇ ಬೆಂಬಲರಾಗಿ ।
ಭೂವರಜ ನದಿ ವಾಸ ಈವರಿವರಿಗೆ ಜಯವು ॥ ॥ ೧ ॥

ಈ ಯತಿಯ ವಲಿಮೆಯೇ ರಾಯರೊಲಿಮೆಯು ಕೇಳು ।
ರಾಯ ರೊಲಿಯಲು ಗುರು ವಾಯು ವಲಿವ ॥
ವಾಯು ವಲಿದಾ ಮಾತ್ರ ಕಾಯಜನ ಜನಕ ಯಮ – ।
ರಾಯ ನಂಜಿಕೆ ಬಿಡಿಸಿ ಕಾಯುವನು ಪ್ರತಿದಿವಸ ॥ ॥ ೨ ॥

ಭಕುತಿ ಪೂರ್ವಕವಾಗಿ ಸಕಲ ಕ್ಷೇತ್ರವ ಚರಿಸಿ ।
ನಿಖಿಳ ಭೂದೇವ ಗಣಕೆ ॥
ವಿಖನ ಸಾರ್ಜಿತ ಮೂಲ ಲಕುಮೀಶ ದರುಶನದ ।
ಸುಖವಿತ್ತು ಪಾಲಿಸಿದ ಅಕಳಂಕ ಮಹಿಮರ ॥ ॥ ೩ ॥

ಸು ಯನಲು ಸುಜ್ಞಾನ ಶೀ ಯನಲು ಶೀಲತ್ವ ।
ಲ ಯನಲು ಲಯ ದೂರವೋ ॥
ಕಾ ಯ ಶುದ್ಧಿಯಲಿ ಇಂದ್ರಾ ಎಂದುಚ್ಚರಿಸಲು ।
ಆಯಿಂದ್ರಲೋಕ ಸುಖವೋ ನಿಜವೋ ॥ ॥ ೪ ॥

ವೃಂದಾರ ಕಾಂಶಜರು ಸಂದೇಹ ವಿಲ್ಲಿವರ ।
ವೃಂದಾವನ ದರುಶನದಿ ॥
ಮಂದಾಕಿನಿಯೊಳಗೆ ಮಿಂದ ಫಲ ಸಂಪ್ರಾಪ್ತಿ ।
ಇಂದಿರಾ ಪತಿ ಶ್ಯಾಮ ಸುಂದರನು ಕೈಪಿಡಿವ ॥ ॥ ೫ ॥

–೦–

## 8. ಸೂರ್ಯ ಯತಿವರ್ಯ

ರಾಗ – ಶಂಕರ ತಾಳ – ಕೇರವ

ಸೂರ್ಯ ಯತಿವರ್ಯ । ಮ –
ಧ್ವಾರ್ಯರ ಸುಮತ ಸರೋಜಕೆ ಸುಶೀಲೇಂದ್ರ ॥ ॥ ಪ ॥

ಬುಧ ಜನ ವಂದಿತ ಸುಧಿ ಸುವೃತೀಂದ್ರರ ।
ಸದ ಮಲ ಘನ ಸದ್ ಹೃದಯಾ ಕಾಶಕೆ ॥ ॥ ೧ ॥

ಧರಣಿ ಸುರಾಗ್ರಣಿ ಗುರು ಸುಕೃತೀಂದ್ರರ ।
ಸರಿಚಿರ ಸರಸಿಜ ಕರ ಪೂರ್ವಾದ್ರಿಗೆ ॥ ॥ ೨ ॥

ಭೂಸುರ ಸೇವಿತ ಪೂಶರ ನಿರ್ಜಿತ ।
ಭಾಸುರ ವರ ಸನ್ಯಾಸ ಸುಭಾಯಕೆ ॥ ॥ ೩ ॥

ಬಗೆ ಬಗೆ ಯಿಂದಲಿ ನಿಗಮೋಕ್ತಿಯಲಿ ।
ರಘು ವರ ನರ್ಚಿಪ ಸುಗುಣ ವೆಂಬ್ಬಿಗಲಿಗೆ ॥ ॥ ೪ ॥

ಶ್ಯಾಮ ಸುಂದರನ ನಾಮವ ಪೊಗಳದ ।
ಪಾಮರ ಮತಿ ಜನ ಸ್ತೋಮ ಯಾಮಿನಿಗೆ ॥ ॥ ೫ ॥

–O–

## 9. ಸ್ಮರಿಸು ಮಾನವ ನಿರತ

ರಾಗ – ದೇಶಿ ತಾಳ – ದೀಪ ಚಂದ

ಸ್ಮರಿಸು ಮಾನವ ನಿರತ ಶ್ರೀ ಸುಶೀಲೇಂದ್ರ ತೀರ್ಥರ ।
ವರಹಜ ತಟವಾಸ ರಾಯರ ಕರುಣ ಪಾತ್ರರ ॥ ॥ ಪ ॥

ಭಾನು ಜನ ಸಮಾನ ದಾನಿ ದೀನ ಪಾಲರಾ ।
ಮಾನಿತ ಸ ನ್ಮೌನಿ ವರಿಯ ಜ್ಞಾನ ಶೀಲರಾ ॥ ॥ ೧ ॥

ಪ್ರಾಣ ಪತಿಯ ಮತಾಬ್ಧಿಗೆ ಪೂರ್ಣೇಣರೆನಿಪರಾ ।
ಕ್ಷೋಣಿ ತಳದಿ ಇವರಿಗೆ ಸರಿಗಾಣೆ ಜಾಣರಾ ॥ ॥ ೨ ॥

ಶ್ಯಾಮ ಸುಂದರ ವಿಠ್ಠಲನ ನಿಸ್ಸೀಮ ಭಕುತರಾ ।
ಸ್ವಾಮಿ ಶ್ರೀ ಸುಕೃತೀಂದ್ರ ಕೋಮಲ ಕರಸಂಜಾತರಾ ॥ ॥ ೩ ॥

–O–

## 10. ಸುಶರಣನ ಸುರಪಾದವ

ರಾಗ – ಅಠಾಣ ತಾಳ – ಕೇರವ

ಸುಶರಣ ಸುರಪಾದವ । ಸುಶೀಲೇಂದ್ರ ಸನ್ಮುನಿಪ ॥ ॥ ಪ ॥

ಚಾರು ಶ್ರೀ ತುಳಸಿ ಸಾರ ಸಾಕ್ಷಮಣಿ ।
ಹಾರ ಶೋಭಿತ ಜಿತ ವಾರಿಜ ಚಾಪ ॥ ॥ ೧ ॥

ಸಲೆ ಮಂತ್ರಾಲಯ ನಿಲಯರ ವಲಿಸಿದ ।
ಅಲವ ಬೋಧಮತ ಜಲಧಿಗೆ ಉಡುಪ ॥ ॥ ೨ ॥

ಕ್ಷಿತಿ ದೇವತೆ ತಟಿನುತ ವರದಾ ತಟಿ ।
ಸ್ಥಿತಿ ಯತಿಪತಿ ಪದವೃತ ತಿಜ ಮಧುಪ ॥ ॥ ೩ ॥

ಕೋವಿದ ಜನ ಸಂಸೇವಿತ ವರ । ವೃಂ –
ದಾವನ ಮಂದಿರ ಪಾವನ ರೂಪ ॥ ॥ ೪ ॥

ವರದ ಶ್ಯಾಮ ಸುಂದರ ರಘುರಾಮನ ।
ಚರಣಾರಾಧಕ ದುರಿತ ನಿರ್ಲೇಪ ॥ ॥ ೫ ॥

–O–

## 11. ಸುಶೀಲೇಂದ್ರ ಸುಶೀಲೇಂದ್ರ

ರಾಗ – ಪೂರ್ವಿ ತಾಳ – ಆದಿ

ಸುಶೀಲೇಂದ್ರ ಸುಶೀಲೇಂದ್ರ ।
ಅಸುನಾಯಕ ಮತ–ವಿಸರುಹ ಭಾಸ್ಕರ ॥ ॥ ಪ ॥

ಕುಂಭಿಣಿದೇವ ಕದಂಬ ವಿನುತ ಜಿತ ।
ಶಂಭರಾರಿ ಕರುಣಾಂಬುಧಿ ಗುರುವರ ॥ ॥ ೧ ॥

ತುಂಗ ಮಹಿಮಯತಿ ಪುಂಗವ ವರದ ತ – ।
ರಂಗಿಣಿ ನಿಲಯ ಸುಮಂಗಳ ಚರಿತ ॥ ॥ ೨ ॥

ಭಾಗವತ ಪ್ರಿಯಾ ರಾಘವೇಂದ್ರರನು – ।
ರಾಗ ಪಾತ್ರ ಮಧ್ವಾಗಮಜ್ಞ ಗುರು ॥ ॥ ೩ ॥

ಸಾರಿದೆ ಸಂತತ ಸೂರಿ ವರಿಯ ಗುರು ।
ಧೀರೇಂದ್ರರ ಪದ ಸಾರಸ ಮಧುಕರ ॥ ॥ ೪ ॥

ಶ್ರೀಮನೋ ವಲ್ಲಭ ಶ್ಯಾಮ ಸುಂದರನ ।
ಪ್ರೇಮಾನ್ವಿತ ನಿಸ್ಸೀಮ ಸನ್ಮಹಿಮ ॥ ॥ ೫ ॥

–O–

## 12. ನಮೋ ನಮೋ ಗುರು

ರಾಗ – ಕೇದಾರ

ತಾಳ – ಝಂಪೆ

ನಮೋ ನಮೋ ಗುರು ಸುಶೀಲೇಂದ್ರ ಶ್ರೀ ಸಂ – ।
ಯಮಿ ಕುಲೋತ್ತಮ ಮಧ್ವ ಸುಮತಾಬ್ಧಿ ಚಂದ್ರ ॥ ॥ ಪ ॥

ಶ್ರೀ ಸುಕೃತೀಂದ್ರ ಕುಮಾರ । ಜಿತ
ಪೂಶರ ಭಾಸುರ ಚರಿತ ಉದಾರ ॥
ಭೂಸುರ ಸೇವಿತ ಧೀರಾ । ಮೂಲ
ದಾಶರಥಿಯ ಪದಾಂಭೋಜ ಬಂಭಾರ ॥ ॥ ೧ ॥

ಶ್ರೀ ರಾಘವೇಂದ್ರರ ಪ್ರೀಯಾ । ವರದ
ತೀರ ಶೋಭಿಪ ರಿತ್ತಿ ಸುಕ್ಷೇತ್ರ ನಿಲಯ ॥
ವಾರಿಜ ಸಖ ನಿಭಕಾಯ । ಭವ
ದೂರ ದಯಾಂಬುಧಿ ದ್ವಿಜ ಕುಲ ಪರಿಯ ॥ ॥ ೨ ॥

**ಶ್ಯಾಮ ಸುಂದರ** ದಾಸಾಗ್ರಣಿಯೆ । ಬುಧ
ಸ್ತೋಮ ವಂದಿತ ಪದ ನತಸುರ ಮಣಿಯೆ ॥
ಈ ಮಹಿಯೊಳು ನಿನಗೆಣಿಯೆ । ಮಮ
ಸ್ವಾಮಿ ಕುಮತ ಕುಲ ತಮಕೆ ದ್ಯುಮಣಿಯೆ ॥ ॥ ೩ ॥

–O–

## 13. ನಮೋ ನಮೋ ಸುಶೀಲೇಂದ್ರ

ರಾಗ – ಸಾರಂಗ                                        ತಾಳ – ದೀಪ ಚಂದ

ನಮೋ ನಮೋ ಸುಶೀಲೇಂದ್ರ । ಗುರು ವರಿಯ ವೈಷ್ಣವ ।
ಸುಮತ ವಾರಿಧಿ ಚಂದ್ರ ಸುಕವಿ ಸಂಸ್ತುತ ।
ಅಮಿತ ಸದ್ಗುಣ ಸಾಂದ್ರ ॥ ಕುಮತಾ ಹಿ ವೀಂದ್ರ ॥
ನಮಿಪ ಜನರಿಗೆ ಅಮರ ಭೂರುಹ ।
ಸಮಸುಖ ಪ್ರದ ವಿಮಲ ಚರಿತನೆ ।
ಯಮಿವರ್ಯ ಸುವೃತೀಂದ್ರ ಮಾನಸ ।
ಕಮಲ ರವಿ ಮಹಿ ಸುಮನಸಾಗ್ರಣಿ ॥ ॥ ಪ ॥

ಅಸಮ ಮಹಿಮೋದರ । ತವ ಸುಪ್ರಭಾವವ ।
ಪಶವೆ ಪೊಗಳಲು ಧೀರಾ । ಸುಜನ ವಂದಿತ ।
ಸ್ವಶನ ಸುಮತೋದ್ಧಾರ । ದಯ ಪಾರವಾರ ॥
ವಸುಧೆಯೊಳು ಮೊರೆ ಹೊಕ್ಕ ಜನರಿಗೆ ।
ಕುಶಲ ಪ್ರದ ನೀ ನೆಂದು ಬುಧ ಜನ ।
ಉಸುರುವುದು ನಾ ಕೇಳಿ ನಿನ್ನ ಪದ ।
ಬಿಸಜ ನಂಬಿದೆ ಪೋಷಿಸನುದಿನ ॥ ॥ ೧ ॥

ದೀನ ಜನ ಸುಖದಾತ । ಸುಕೃತೀಂದ್ರ ಕೋಮಲ ।
ಪಾಣಿ ಪದ್ಮ ಸುಜಾತ । ಜಯವಂತ – ಜಿತಸ್ಮರ ।
ಬಾಣ ಲೋಕ ವಿಖ್ಯಾತ ॥ ದ್ವಿಜ ಕುಲಕೆ ನಾಥ ॥
ಕ್ಷೋಣಿಯೊಳು ನೀ ವಲಿದ ಮಾತ್ರದಿ ।
ಮೌನಿವರ್ಯ ಶ್ರೀ ರಾಘವೇಂದ್ರರು ।
ಸಾನು ರಾಗದಿ ಸಲಹುವರು ಪವ – ।
ಮಾನ ಶಾಸ್ತ್ರ ಪ್ರವೀಣ ಜಾಣ ॥ ॥ ೨ ॥

ಪಿಂಗಳೇಂದು ಪ್ರಕಾಶ । ಸುಪವಿತ್ರ ವರದ, ತ– ।
ರಂಗಿಣಿ ತಟವಾಸ । ಸದ್ಧರ್ಮ ಸ್ಥಾಪಕ ।
ಮಂಗಳಾಂಗ ಯತೀಶ ॥ ಪಾಪೌಂಘ ನಾಶ ॥
ತುಂಗ ವಿಕ್ರಮ ಶ್ಯಾಮ ಸುಂದರ ನಂಘ್ರಿ ಕಮಲಕೆ ।
ಭೃಂಗ ಭವಗಜ ಸಿಂಗ ಕರುಣಾ – ।
ಪಾಂಗ ದೀಕ್ಷೆಸೆ ಇಂಗಿತಜ್ಞರ
ಸಂಗ ಪಾಲಿಸು ॥ ॥ ೩ ॥

–೦–

## 14. ಪಾಲಯ ಮಾಂ

ರಾಗ – ಪೀಲು  ತಾಳ – ದಾದರ

ಪಾಲಯ ಮಾಂ ಸುಶೀಲೇಂದ್ರ ಸನ್ಮಹಿಮ ।
ಶಾಲಿ ಶ್ರೀ ವರದ ಕೂಲ ನಿವಾಸ ॥ ॥ ಪ ॥

ಅನಿಲ ಮತಾಂಬುಧಿ ಅನಿಮಿಷ ಧೀರಾ ।
ಅನುಪಮ ಚರಿತ ಸದ್ಗುಣ ಗಂಭೀರಾ ।
ಮುನಿ ಸುವೃತೀಂದ್ರ ಸನ್ಮಾನಸ ನಿಲಯಾ ॥ ॥ ೧ ॥

ಕರುಣಾ ಭರಿತ ಶರಣು ಸಂಪ್ರೀತ ।
ಪರಮ ಪುರುಷ ಸುಕೃತೀಂದ್ರ ಕುಮಾರ ।
ಪರಮತ ಪರ್ವತ ಕುಲಿಶ ಸುಧೀರಾ ॥ ॥ ೨ ॥

ಕೋವಿದ ರೊಡಿಯ ಪಾವನ ಕಾಯಾ ।
ಭೂವಿಭುದಾವಳಿ ಸೇವಿತ ಸದಯಾ ।
ಶ್ರೀ ವರ ಶ್ಯಾಮ ಸುಂದರ ಗತಿ ಪ್ರಿಯಾ ॥ ॥ ೩ ॥

–೦–

## 15. ದೈಶಿಕ ನಾಥಾ

ರಾಗ – ಕಲಾವತಿ  ತಾಳ – ರೂಪಕ

ದೈಶಿಕ ನಾಥಾ ।
ಶ್ರೀ ಸುಶೀಲೇಂದ್ರ ಗುರೋ ॥ ॥ ಪ ॥

ಚಿತ್ತಜ ಮಾರ್ಗಣ ।
ಮತ್ತ ಗಜಾಂಕುಶ ।
ರಿತ್ತಿ ಸನ್ಮಂದಿರ ಭೋ ॥ ॥ ೧ ॥

ಸದ್ಧರ್ಮ ಶೀಲ ।
ಶುದ್ಧ ಸ್ವಭಾವ ।
ಮಧ್ವ ಮತಾಬ್ಧಿ ವಿಧೋ ॥ ॥ ೨ ॥

ಶ್ರೀ ಮನೋ ವಲ್ಲಭ ।
ಶ್ಯಾಮ ಸುಂದರ ಸು– ।
ಪ್ರೇಮ ಸತ್ಪಾತ್ರ ಪ್ರಭೋ ॥ ॥ ೩ ॥

–೦–

## 16. ಇಂದು ನೋಡಿದೆ ಸುಶೀಲೇಂದ್ರ

ರಾಗ – ತೋಡಿ                                                    ತಾಳ – ರೂಪಕ

ಇಂದು ನೋಡಿದೆ ಸುಶೀಲೇಂದ್ರ ಗುರುಗಳ ॥ ॥ ಪ ॥

ಕುಂದಣದ ಶಿಖರ ಮೌಕ್ತಿಕ ದಿಂದ ವಿರಾಜಿಸುವ ರಜತ ।
ಅಂದಣವ ನೇರಿ ಸಂಭ್ರಮ ದಿಂದ ಮೆರೆದು ಬರುವ ಗುರುಗಳ ॥ ಅ.ಪ ॥

ಧ್ವಜ ಪತಾಕೆ ಶ್ವೇತಛತ್ರ । ರಜತ ವರ್ಣ ಚವರ ಚಾಮರ ।
ಭಜಿಪ ಭಟರ ಸಂದಣಿ ಮಧ್ಯ । ರಜನಿ ಪತಿಯ ತೆರದಿ ಶೋಭಿಪರಿಂದು॥೧॥

ಭೇರಿ ಕಹಳೆ ವಾದ್ಯನೇಕ । ಚಾರುತರ ಶೃಂಗಾರ ವಾದ ।
ವಾರಣಗಳು ಎಡಬಲದಿ । ಸಾರಿ ಬರುವ ಸಂಭ್ರಮವನು ॥ ॥ ೨ ॥

ಎಲ್ಲಿ ನೋಡೆ ಪಾಠ ಪ್ರವಚನ । ನೆಲ್ಲಿ ನೋಡೆ ವೇದಶಾಸ್ತ್ರ ।
ಎಲ್ಲಿ ನೋಡಲಲ್ಲಿ ಲಕುಮಿ । ನಲ್ಲನ ಸತ್ಕಥಾ ಲಾಪ ॥ ॥ ೩ ॥

ಆ ಮಹಾ ಸುಶೋತ ಮಾದ । ಹೇಮ ಮಂಟಪ ಮಧ್ಯ ಮೂಲ ।
ರಾಮಾರ್ಚನೆ ಗೈವ ವಂದ । ಪ್ರೇಮದಿ ನೋಡಿ ಧನ್ಯನಾದೆ ॥ ॥ ೪ ॥

ಈ ಮಹಾಗುರುವರ್ಯರ ಪದ । ತಾಮರಸವ ಪೊಂದಿದ ಭಕ್ತರ ।
ನೇಮ ದಿಂ ವರದೇಶ ವಿಠ್ಠಲ । ಕಾಮಿತಾರ್ಥ ಗರೆವ ಸತ್ಯ ॥ ॥ ೫ ॥

-೦-

## 17. ಶ್ರೀ ಸುಶೀಲೇಂದ್ರ ಗುರುಗಳ

ರಾಗ – ಮೋಹನ ತಾಳ – ಆದಿ

ಶ್ರೀ ಸುಶೀಲೇಂದ್ರ ಗುರುಗಳ ಪದವ ಕಂಡೆ ।
ಏಸು ಜನುಮದ ಪುಣ್ಯ ಫಲ ಲಭಿಸಿತಿಂದು ॥ ॥ ಪ ॥

ಆ ಸುಕೃತಿ ಮುನಿ ಕರ ಸುಜಾತ ರೆಂದೆನಿಸುವ ।
ಶ್ರೀ ಸುಧಾರಸ ದಾರ್ದ್ರ ತೃಪ್ತಾಂಗರ ॥
ಭೂಸುರಾವಳಿಯ ಮನದಾಸೆಯನು ಪೂರೈಸಿ ।
ದೇಶ ದೇಶದಿ ಕೀರ್ತಿ ಧ್ವಜವ ಮೆರೆಸಿರುವ ॥ ॥ ೧ ॥

ಶ್ರೀ ಮೂಲ ರಾಮಚಂದ್ರನ ಕೃಪೆಯ ಮೂರುತಿಯೋ ।
ಆ ಮಹಾ ಗುರುರಾಜ ವಿಭೂತಿಯೋ ॥
ಭೂಮಿಯೊಳು ರವಿಸುತನ ನಾಚಿಸುವ ವಾರ್ತೆಯೋ ।
ಕಾಮಾದಿಗಳ ಗೆದ್ದ ಸತ್ಕೀರ್ತಿ ಸ್ಥಳವೋ ॥ ॥ ೨ ॥

ಶಮ ದಮಾದಿಗಳಧಿಷ್ಠಾನವೋ ಶಾಂತಿ ಶ್ರೀ ।
ಯಮ ನಿಯಮಗಳಿಗೆಲ್ಲ ಸಂಸ್ಥಾನವೋ ॥
ಅಮಿತ ಸದ್ಗುಣಗಳಿಗೆ ವಿಶ್ರಾಂತಿ ಧಾಮವೋ ।
ವಿಮಲ ಗೋವಿಂದಿನ್ನಿ ಪತಿ ಪ್ರೀತಿ ಸ್ಥಳವೋ ॥ ॥ ೩ ॥

– O –

## 18. ನೆನೆಯೋ ಸದಾ ನಮ್ಮ ಗುರುವರನ

ರಾಗ – ಆನಂದ ಭೈರವಿ ತಾಳ – ಆದಿ

ನೆನೆಯೋ ಸದಾ ನಮ್ಮ ಗುರುವರನ
ಘನ ಶ್ಯಾಮ ಸುಂದರ ರಾಮನ ಪ್ರಿಯನ ॥ ॥ ಪ ॥

ವರದಾ ತರಂಗಿಣೀ ತೀರದಿ ರಾಜಿಪ ।
ಕರುಣಾ ಮೂರುತಿ ಸುಶೀಲೇಂದ್ರ ಮುನಿಯೆ ॥ ॥ ೧ ॥

ಸಂತ ರೊಡೆಯ ಶ್ರೀ ಮಂತ್ರ ಮಂದಿರ ನ ।
ಸಂತತ ಸೇವಿಸಿ ಪೀಠವ ಕಾಯ್ದವನ ॥ ॥ ೨ ॥

ವರದ ಶ್ರೀಶನಿಗೆ ಸ್ವರ್ಣ ಮಂಟಪ ರಚಿಸಿ ।
ಪರತರ ಆನಂದ ಪಡೆದ ಸಂಯಮಿಯ ॥ ॥ ೩ ॥

– O –

## 19. ಸುಶೀಲೇಂದ್ರ ಸುಶೀಲೇಂದ್ರ

ರಾಗ – ನಾಟಿ ತಾಳ – ಆದಿ

ಸುಶೀಲೇಂದ್ರ ಸುಶೀಲೇಂದ್ರ ॥ ॥ ಪ ॥
ಪುಶಿಯ ವಾದಿ ಕರಿವೃಂದ ಮೃಗೇಂದ್ರ ॥ ॥ ಅ.ಪ ॥

ಅಮರರ ಗೋಸಮ ಸುಕೃತೀಂದ್ರರ ಕರ । ಪ
ದುಮ ಜಾತ ಗುರು ಪದ್ಮನಾಭ ಪ್ರಿಯ ॥ ॥ ೧ ॥

ಮುದ್ದು ಮಧ್ವಾರ್ಯರ ಶುದ್ಧ ಮತಾಬ್ಧಿಯೋಳ್ ।
ಉದ್ಭವಿಸಿದ ಶಶಿ ಉದ್ಧರಿಸೋ ಎನ್ನ ॥ ॥ ೨ ॥

ಪಂಡಿತರೆಂಬಧೇನು ಹಿಂಡು ಕಾಯ್ದು ಭೂ ।
ಮಂಡಲ ಚರಿಸಿದ ಪಂಡಿತ ಶಿರೋರತ್ನ ॥ ॥ ೩ ॥

ಹೇಮ ಮಂಟಪವನ್ನು ಪ್ರೇಮದಿ ಮಾಡಿ ಮೂಲ ।
ರಾಮನ ದಿವ್ಯಪದ ತಾಮರಸ ಪೂಜಿಸಿದ ॥ ॥ ೪ ॥

ಅಷ್ಟ ಯತಿಗಳ ಇಷ್ಟದಿ ಉಡುಪಿಗೆ ।
ಶ್ರೇಷ್ಠ ತರದಿ ಪೋಗಿ ಕೃಷ್ಣನ ಭಜಿಸಿದ ॥ ॥ ೫ ॥

ಮೇದಿನಿ ಸುರರಿಗೆ ಭೇದ ಬಾಣ ಪೇಳಿ ।
ವೇದ ದಶಾಬ್ದದಿ ವೇದಾಂತ ರಾಜ್ಯ ವಾಳ್ದ ॥ ॥ ೬ ॥

ಹುಲಿ ಕೃಷ್ಣಾರ್ಯರಿ ಗೊಲಿದು ಆಶ್ರಯವಿತ್ತು ।
ಮೂಲ ರಾಮನ ಪಾಡಿ ಬಾಳೆಂದೆ ಜಗದೊಳು ॥ ॥ ೭ ॥

ವಾಸುಕಿಶಯನನ ಲೇಸಾಗಿ ಭಜಿಸುತ ।
ಕಾಶಿ ಸಮ ರಿತ್ತಿವಾಸ ಕರ್ಮಂದೀಂದ್ರ ॥ ॥ ೮ ॥

ವರದಾ ತೀರದಿ ಮೆರೆವ ಧೀರೇಂದ್ರರ ।
ಚರಣಾ ರಾಧಕ ಪರಿಪಾಲಿಸೋ ಎನ್ನ ॥ ॥ ೯ ॥

ಜ್ಞಾನದ ಬೆಳಕನ್ನು ಸಾನುರಾಗದಿ ತೋರಿ ।
ಮಾನವ ಸಿಂಗನ ಧ್ಯಾನವ ನೀಯೋ ॥ ॥ ೧೦ ॥

ಲಕುಮೀಶ ದೇವನ ಭಕುತಿ ಪಾಶದಿ ಕಟ್ಟಿ ।
ಸುಖಪಡುವೋ ದಿವ್ಯ ಮುಕುತಿ ಪಥವ ತೋರಿ ॥ ॥ ೧೧ ॥

–೦–

## 20. ವರದಾ ತೀರದ ರಿತ್ತಿ ಪುರದಲಿ

ರಾಗ – ಭೂಪ ತಾಳ – ಆದಿ

ವರದಾ ತೀರದ ರಿತ್ತಿ ಪುರದಲಿ ಮೆರೆವರು ಯಾರೇ ಪೇಳಮ್ಮಯ್ಯ ॥ ಪ ॥

ಗುರು ಸುಕೃತೀಂದ್ರರ ಕರ ಪದ್ಮಜರಾಗಿ ।
ಮೆರೆವ ಸುಶೀಲೇಂದ್ರ ಮೌನಿ ಕಾಣಮ್ಮ ॥ ॥ ಅ.ಪ. ॥

ಅಣ್ಣಂದಿರಲ್ಲೆ ವಿದ್ಯಾ ಕಲಿತು । ದಿವಾನರೆನಿಸಿ ।
ಉನ್ನಂತ ಕಾರ್ಯ ದೀಕ್ಷಾವರಿತು ॥
ಚನ್ನಸಭೆ ಶ್ರೀ ಸಮೀರ ಸಮಯದಿ ।
ಘನ್ನ ಕವಿಗಳನು ಮನ್ನಿಸಿ ಸಲಹುತ ॥ ॥ ೧ ॥

ಹೇಮಾ ಮಂಟಪಾ ಬೃಹದ ರಚಿಸೀ । ಹರುಷದಿ ಭಕುತಿಲಿ ।
ಶ್ರೀ ಮೂಲರಾಮನ ನಿತ್ಯವು ಅರ್ಚಿಸಿ ॥
ಸಮೀರ ಸಭೆಯಲಿ ನಂಜನಗೂಡಲಿ ।
ಪ್ರೇಮದಿ ಬುಧರಿಗೆ ಧನಕನಕಾವಿತ್ತು ॥ ॥ ೨ ॥

ವಿಬುಧ ಪ್ರಿಯರು ಆಹ್ವಾನ ಮಾಡೆ । ಉಡುಪಿಗೆ ತೆರಳೆ ।
ಶುಭವಾದ್ಯ ವೇದರವದಿ ಗೂಡಿ ॥
ಪ್ರಭುಗಳು ಕಳಿಸಿದ ಪಾಲಕಿಯೊಳಗೇ ।
ವಿಭವದಿ ಬಹುದೂರ ಮೆರವಣಿಗೊಂಡರ ॥ ॥ ೩ ॥

ಕಡಗೋಲ ಕಳ್ಳ ಕೃಷ್ಣನ ನೋಡಿ । ಆನಂದ ಮದವೇರಿ ।
ಅಡಿಯಲಿ ನವರತ್ನ ಧನಕನಕಾದಿ ನೀಡಿ ॥
ಪಡೆಯುತ ಮನ್ನಣೆ ಅಷ್ಟ ಮೌನಿಗಳ ।
ಬಿಡದೆ ಮನ್ನಿಸುತ ದೃಢಕೀರ್ತಿ ಪಡೆಯುತ ॥ ॥ ೪ ॥

ಕನಕಾಕಿಂಡಿಗೆ ಹತ್ತಿರ ಮಠವ । ಶ್ರೀ ರಾಘವೇಂದ್ರರ ।
ಘನ ಶಾಸ್ತ್ರೋಕ್ತಾದಿ ವೃಂದಾವನವ ॥
ಮಿನುಗುವ ವೈಭವದಿಂದ ಮಾಡುತಲಿ ।
ಇನನ ಕಾಂತಿಯಲಿ ಜಗದಲಿ ಹೊಳೆಯುತ ॥ ॥ ೫ ॥

ವರಮಂತ್ರ ಮಂದಿರಕಿವರು ಬಂದು । ಶ್ರೀ ಮಠದಲ್ಲಿ ।
ಪರಿಪರಿ ಸೇವೆಗಳ್ನಡೆಸಲು ನಿಂದು ॥
ತ್ವರ ಪ್ರಹ್ಲಾದರ ಮೂರ್ತಿಯ ನಿರ್ಮಿಸಿ ।
ಪರಿಮಳಾರ್ಯರ ಆರಾಧನ್ವಿಧಿ ಗೈದು ॥ ॥ ೬ ॥

ಸುಖಮುನಿ ಶಾಸ್ತ್ರ ಬೋಧಿಸುತ್ತ ॥ ಲಕುಮೀಶ ಧ್ಯಾನದಿ ।
ಸುಖದೀ ಧೀರೇಂದ್ರರ ಬಳಿಯಲಿ ರಾಜಿಸುತ ॥
ಭಕುತಿಲಿ ಆಷಾಢ ಶುದ್ಧ ತದಿಗಿಯ ದಿನ ।
ಪ್ರಖರ ತೇಜದಲಿ ವೃಂದಾವನ ಸೇರ್ದ॥ ॥ ೭ ॥

-O-

## 21. ವಂದನೆಯು ಮಾಡುವೆನು

ರಾಗ – ಮಾಲಕಂಸ ತಾಳ – ಝಂಪೆ

ವಂದನೆಯ ಮಾಡುವೆನು ಚಂದದಲಿ ಪಾಡುವೆನು ।
ವೃಂದಾವನದಿ ನಿಂತ ಸುಶೀಲೇಂದ್ರ ಗುರುಗಳಿಗೆ ॥ ॥ ಪ ॥

ಮೂಲ ರಾಮನ ಪೂಜೆ ವೈಭವದಿ ನೀ ನಡೆಸಿ ।
ಲೀಲೆ ಮಿಗೆ ಹರುಷದಲಿ ವಾಯುದೇವರ ಭಜಿಸಿ ॥
ಮೂಲ ಮೂವತ್ತೇಳು ಗ್ರಂಥದಾ ಮಹಿಮೆಯನು ।
ಸುಲಭದಲಿ ಸುಜನರಿಗೆ ಬೋಧಿಸಿದ ಮಹಾಪ್ರಭುವೆ ॥ ॥ ೧ ॥

ದಂಡ ಕೋವಿಯ ಪಿಡಿದು ಕಾಷಾಯ ವಸನ ಧಾರಿ ।
ಗಂಡು ಗಲಿಯಾಗಿ ಭೂಮಂಡಲದಿ ಮೆರೆದೆ ॥
ಪಂಡಿತರು ಪಾಮರರು ನಿನ ಕಂಡು ಭಯದಿಂದ ।
ದಂಡ ಪ್ರಣಾಮವನು ಮಾಡುವರೋ ಗುರುವೇ॥ ॥ ೨ ॥

ಹೊಸರಿತ್ತಿ ಪುರದಾ ಧೀರೇಂದ್ರ ಗುರುಗಳಲಿ ।
ನಸುನಗುತ ನೀ ಬಂದೆ ಇಲ್ಲಿ ನಿಂದೇ ॥
ಅಸಮ ಗುಣ ಪೂರ್ಣ ವೆಂಕಟೇಶನ ನಿತ್ಯ ।
ಹಸನಾಗಿ ಧ್ಯಾನಿಸುವ ಮುನಿ ಶಿಖಾಮಣಿಯೇ ॥ ॥ ೩ ॥

-O-

## 22. ಯತಿದ್ವಯರನೆ ಸ್ಮರಿಸೋ

ರಾಗ – ಪೂರಿಯಾ ತಾಳ – ದಾದರಾ

ಯತಿ ದ್ವಯರನೆ ಸ್ಮರಿಸೋ । ಪ್ರತಿದಿನ ॥ ಪ ॥

ಸತತ ಭಕ್ತಿ ಜ್ಞಾನ ಪ್ರಾರ್ಥಿಪರಿಗುಣಿಸುತ ।
ವಾತ ನೊಲಿಮೆಲಿ ಮುಕುತಿ ಪ್ರಾದಾತರೆನಿಸಿದ ॥ ॥ ಅ.ಪ. ॥

ಗುರು ಸುಕೃತೀಂದ್ರರ । ಕರಜರೆಂದೆನಿಸಿದ ।
ಗುರು ಸುಶೀಲೇಂದ್ರರ । ಪರಮ ಭಕ್ತಿಯ ಬೇಡಿ ॥ ॥ ೧ ॥

ವರದೇಂದ್ರ ತೀರ್ಥರ । ವರಪುತ್ರರೆನಿಸಿದ ।
ಗುರು ಧೀರೇಂದ್ರರ । ಗುರುತರ ಜ್ಞಾನಕೆ ॥ ॥ ೨ ॥

ಧೀರವಿಠ್ಠಲ ಪ್ರಿಯ । ಗುರುರಾಘವೇಂದ್ರರ ।
ಕರುಣ ಪಡೆದು । ಪುರ ರಿತ್ತಿಲಿ ನೆಲಸಿಹ ॥ ॥ ೩ ॥

-O-

## 23. ಜಯ ಮಂಗಳಂ

ರಾಗ – ಭೈರವಿ ತಾಳ – ಆದಿ

ಜಯ ಮಂಗಳಂ । ನಿತ್ಯ ಶುಭಮಂಗಳಂ ।
ದಯ ಪಯೋನಿಧಿ ಸುಯತಿ ಸುಶೀಲೇಂದ್ರಗೆ ॥ ॥ ಪ ॥

ನಕ್ಷತ್ರ ಸಂಭವನ ಸಲೆ ಜೈಸುತಲಿ ಜಗದಿ ।
ನಕ್ಷತ್ರ ಪತಿಯಂತೆ ರಾಜಿಸುತಲಿ ।
ನಕ್ಷತ್ರ ರಾಮನಂ ಭಕ್ತಿ ಪೂರ್ವಕವಾಗಿ ।
ನಕ್ಷತ್ರ ಕಮಲದಿಂ ಪೂಜಿಸುತೆ ಮೆರೆದವಗೆ ॥ ॥ ೧ ॥

ಯೋಗ ಪ್ರದರಾಯರ ಯೋಗ ಸತ್ಪಾತ್ರನಿಗೆ ।
ಯೋಗ ಕುಲನಾಥ ಆ – ನತ ಪಾಲಗೆ ।
ಯೋಗಾಂಗ ಮತ ಜಗದಿ ಯೋಗವನು ಗಳಿಸುತಲಿ ।
ಯೋಗ ಪರನೆಂಬರೆದ ಯೋಗನಾದವಗೆ ॥ ॥ ೨ ॥

ಸಾಮಜಾ ಹಯದಿಂದ ಭೂಮಿ ಸುರಗುಣ ದಿಂದಾ ।
ಸೋಮಾರ್ಕ ವಾದ್ಯ ಬಹು ಬಿರಿದಿ ಲಿಂದಾ ।
ಶ್ರೀ ಮುದ್ದುಡುಪಿಗೆ ಪೋಗಿ ಹೇಮಾಭಿಷೇಕದಿ ।
ಶ್ಯಾಮ ಸುಂದರ ಕೃಷ್ಣ ಸ್ವಾಮಿಯರ್ಚಿಸಿದವಗೆ ॥ ॥ ೩ ॥

–೦–

## 24. ಮಂಗಳಂ ಮಂಗಳಂ

ರಾಗ – ಭೈರವಿ ತಾಳ – ಆದಿ

ಮಂಗಳಂ । ಮಂಗಳಂ । ಜಯ ।
ಮಂಗಳಂ ಶ್ರೀ ಸುಶೀಲೇಂದ್ರ ಸನ್ಮುನಿಪ ॥ ॥ ಪ ॥

ದಾತ ಧರಾಮರ । ವ್ರಾತ ವಿನುತ ಯತಿ ।
ನಾಥ ಶ್ರೀ ರಾಯರ । ಪ್ರೀತ ಪ್ರಖ್ಯಾತ ॥ ॥ ೧ ॥

ಯತಿವರ ನತಸುರ । ಕ್ಷಿತಿರುಹ ಜಿತರತಿ ।
ಪತಿಶರ ಸುಕೃತೀಂದ್ರ । ಸುತ ಸೂರಿ ವರಿಯಾ ॥ ॥ ೨ ॥

ಸೋಮ ಧರಾರ್ಚಿತ । ಶ್ಯಾಮ ಸುಂದರ ಮೂಲ ।
ರಾಮ ಪದಾರ್ಚಕ । ಕೋಮಲ ಕಾಯ ॥ ॥ ೩ ॥

–೦–

## 25. ಶ್ರೀ ಸುಶೀಲೇಂದ್ರ ಮಂಗಳ ರತ್ನಮಾಲಾ

ಶ್ರೀಮಧ್ವಾಬ್ಧಿಕ ವಿದ್ವದನ್ನಯ ಸುಧಾವಾರಾಂಭುದೌ ಚಂದ್ರವ
ತ್ಸಂಜಾತಾಮಂ ರಾಘವೇಂದ್ರಯತಿ ರಾಡ್ವಂಶೇ ಜಗತ್ಪಾವನೇ ।
ಜಾತೋ ವೆಂಕಟರಾಘವೇಂದ್ರ ವಿಬುಧಾದ್ವಾಣ್ಯಾಂ ಜಗದ್ವಂದಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೧॥

ಶ್ರೀ ಮದ್ವೇಂಕಟಶೈಲ ಲೋಲಕಮಲಾನಾಥಾ ಶ್ರಯಾತ್ಸಂ ಪದಂ
ಶ್ರೀಮತ್ಪಾವನ ಪಾದಮಾನ ಕರುಣಾತ್ ಷಡ್ದರ್ಶನೇ ಧಿಷ್ಣತಾಂ ।
ಲಬ್ಧ್ವಾ ಶ್ರೀ ಗುರುರಾಘವೇಂದ್ರ ದಯಯಾ ಕೀರ್ತಿಂ ಚಯೋ ರಾಜತೆ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೨॥

ನಾಕಾದೀಶ ಸಖಾನಿ ಭಾಂ ಬುಧಸಭಾಂ ಕುರ್ವನ್ ಸ್ವಪೂರ್ವ ಶ್ರಮೇ
ವ್ಯಾಕ್ಯಾರ್ಥಂ ಸುವಿಚಾರಮಾಶು ಕಲಯೇನ್ ಷಡ್ದರ್ಶನೇ । ಪಂಡಿತಾನ್ ।
ಸೌವರ್ಣಾಮಿತ ವಸ್ತ್ರರಾಜತ ಧನ್ಯೈಃ ಸಂಭಾವ್ಯ ಸಮ್ಮಾನಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೩॥

ನ್ಯಾಯೇ ವ್ಯಾಕರಣೇ ನಯೇ ಸುಕವನೇ ವೇದಾಂತ ಶಾಸ್ತ್ರೇ ತಥಾ
ವಾದೇ ಸನ್ನತ ರಕ್ಷಣೇ ಪ್ರಸರಣೇ ಚಾತುರ್ಯ ವಾಗ್ವೈಭವಃ ।
ಔದಾರ್ಯೇ ತಪಸಾ ಚ ವಿಶ್ರುತಯಶಾಃ ಯಸ್ಸರ್ವಲೋಕಾರ್ಚಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೪॥

ಶ್ರೀಮನ್ಮಧ್ವಮುನೀಂದ್ರ ಭೂಷಿತ ಮಹಾವೇದಾಂತ ರಾಜ್ಯೇಲಸ
ಟ್ಟೀಕಾಕೃದ್ವಿಭುದೇಂದ್ರ ಮೌನಿ ವಿಜಯೀಂದ್ರಾ ದ್ಯೈಶ್ಚಿರಂಶಾಸಿತೇ ।
ಪ್ರಹ್ಲಾದಾಂಶಜ ರಾಘವೇಂದ್ರಯತಿರಾಡ್ವಿದ್ಯಾಸನೇ ಮಂಡಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೫॥

ಶ್ರೀ ಮನ್ಮೂಲ ಧರಾಸುತೇಶ ಚರಣಾಂ ಭೋಜೇ ಸುಭೃಂಗಾಯಿತಃ
ಮಾಯ ವಾದ ಕುಲಾದ್ರಿಗರ್ವದಲನೇ ವಿಖ್ಯಾತ ವಜ್ರಾಯಿತಃ ।
ವಿದ್ವದ್ಪರ್ಯ ಸುಕೈರವಾ ಮಿತಶುಭಾಹ್ಲಾದೇ ಸುಚಂದ್ರಾಯಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೬॥

ಶ್ರೀ ಪದ್ಮಾಸನ ಪೂಜಿತಂ ಪರತರಂ ಶ್ರೀಮೂಲರಾಮಂ ಪ್ರಭುಂ
ಸೌವರ್ಣೋಜ್ವಲ ಮಂಟಪೇ ಸ್ವರಚಿತೇ ಸಂಪೂಜ್ಯ ಸಂತೋಷಯನ್ ।
ಶಿಷ್ಯೇಭ್ಯೋಹರಿ ತತ್ವಪಾಠನಪಟುಃ ದುರ್ವಾದಿ ಗರ್ವಾಪಹಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೭॥

ವಿದ್ವತ್ತೋಷಣ ಮಾಶ್ರಿತೇಷ್ಟಭರಣಂ ಕ್ಷೇತ್ರಾಚನಂ ಪಾಠನಂ
ಸದ್ವೇದಾಂತ ವಿದರ್ಧನಂ ಪರಮತಸ್ಯೋತ್ಪಾಟನಂ, ಮೋದನಂ ।
ಭಕ್ತಾನಂ ಪರಿಪಾಲನಂ ಚ ಕಲಯಾನ್ ಸರ್ವೈಸ್ಸದಾ ಸೇವಿತಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೮॥

ಶ್ರೀಮನ್ಮಂತ್ರ ಸುಪದ್ಮ ವೃದ್ಧಿಕರಣಂ ಪಾಠಾಲಯಸ್ಥಾಪನಂ
ಯತ್ರಾರ್ಥಾ ಗತ ಸರ್ವಸಜ್ಜನಗಣ ಷ್ಠಾ ಶದ್ಯೈರ್ಮೋದನಂ ।
ಕುರ್ವನ್ ಬೃಂದ ಸಮಂದಿರೇಶ ಮಹಿಮಾಪ್ರಖ್ಯಾಪನಂ ಜೋತ್ಸವಂ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೯॥

ಶ್ರೀಮದ್ರಾಜತಪೀಠ ಪುಣ್ಯಪುರಗಂ ಕೃಷ್ಣಾಂ ಸಮಾರಾಧಯನ್
ಕೃಷ್ಣೇಷ್ಟಂ ಗುರುರಾಘವೇಂದ್ರಯತಿಪಂಸ್ಪೀಯೇ ಮಠೇ ಸ್ಥಾಪಯನ್ ।
ಅಷ್ಟೋತ್ಕೃಷ್ಟ ಮಠಾಧೀಪೈರಸದೃಶಂ ಸಮ್ಮಾನಿತೋ ಸ್ಮದ್ಗುರುಃ
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೧೦॥

ಸತ್ಸೀವ್ಯೇ ವರದಾನದೀ ಸುಮಹಿತೀ ಕ್ಷೇತ್ರೇ ಪವಿತ್ರೇ ಮುದಾ
ರಿತ್ಯಾಖ್ಯೇ ಗುರುಧೀರಸಿಂಹ ಯತಿರಾಟ್ ಸಂಶೋಭಿಯೇ ಯೋಗಿರಾಟ್ ।
ಸದ್ಬೃಂದಾವನ ಮಂಡಿತೋ ನಿಜಜನಾಭೀಷ್ಟಾರ್ಥ ಮಾಪೂರಯನ್
ಪ್ರಾಜ್ಞಾಚಾರ್ಯ ಭರಸ್ಸು ಶೀಲಯತಿರಾಟ್ ಕುರ್ಯಾದ್ಧ್ರುವಂ ಮಂಗಳಮ್॥೧೧॥

ಯೇ ನಿತ್ಯಂ ಶರಣಾಗತಾ ಮರತರೂನ್ ಸ್ಪರ್ಧೇನು ಚಿಂತಾಮಣೀನ್
ಸತ್ಪಾಧೀರ ಯತೀಂದ್ರ ಶ್ರೀಲಮನಿಪಾನ್ ಭಕ್ತ್ಯಾಭಜಂತ್ಯಾದರಾತ್ ।
ಆರೋಗ್ಯಂ ಬಹುಭಾಗ್ಯಮಿಪ್ಸಿತಸುಖಂ ವಿದ್ಯಾಂ ಸಮೃದ್ಧಾಂ ಚತೇ
ಲಬ್ಧ್ವಾ ಪುತ್ರ ಕಳತ್ರ ಕೀರ್ತಿಲಸಿತಾಃ ಪ್ರಾಪ್ನ್ಯಂತಿ ಸನ್ಮಂಗಳಮ್॥ ೧೨ ॥

ಶ್ರೀಮತ್ಸುಶೀಲ ಗುರುಪುಂಗವ ಪಾದಸೇವೀ
ಸದ್ಭಿನ್ನ ಭಾವ ಭರಿತೋ ಗುರುರಾಜ ನಾಹೂ ।
ಕೃತ್ವಾ ಗುರೋಸ್ಸುಮಹಿಮಾ ಭರರತ್ನಮಾಲಾಂ
ತತ್ಪಾ ಪದ್ಮಯುಗಳೇ ರ್ಪಯತಿ ಪ್ರಹರ್ಷಮ್ ॥ ॥ ೧೩ ॥

ಶ್ರೀ ಸುಶೀಲೇಂದ್ರ ತೀರ್ಥಾರ್ಯ ಪರಮಾನುಗ್ರಹೇ ಚ್ಛುನಾ
ಗುರುರಾಜೇನ ರಚಿತಾ ಭಾತಿ ಮಂಗಳ ಮಾಲಿಕಾ ॥

-೦-

## ಶ್ರೀ ರಾಜಾ ಎಸ್. ಗುರುರಾಜ ಆಚಾರ್ಯರಿಂದ ರಚಿತವಾದ ಸಂಸ್ಕೃತ ಕೀರ್ತನೆಗಳು

### 26. ಶ್ರೀ ಸುಶೀಲೇಂದ್ರ ಗುರುಮಾಶ್ರಯೇ ಸತತಮ್

ರಾಗ – ಆರಭಿ

ತಾಳ – ಝಂಪೆ

ಶ್ರೀ ಸುಶೀಲೇಂದ್ರ ಗುರು ಮಾಶ್ರಯೇ ಸತತಮ್ ।
ಭಾಸುರ ಸುಕೀರ್ತಿ ಸಂಭೂಷಿತ ದಿಗಂತಮ್ ॥ ॥ ಪ ॥

ವಾಸುದೇವ ಪರತ್ವ ತತ್ವ ಪ್ರಕಾಶಕಮ್ ।
ವಾಸುಕಿ ಶಯನ ಶ್ರೀ ಕಮಲೇಶ ದಾಸಮ್ ।
ಶ್ರೀ ಸಮೀರ ಮತಾಬ್ಧಿ ಜಾತಯತಿ ರಾಜಮ್ ।
ಆಶ್ರಿತ ಧರಾ ಮರೇ ಷ್ಟದ ದೇವ ಭೂಜಮ್ ।
ಅಸು ದೇವ ಮಧ್ವಮುನಿ ಪೀಠಾದಿರಾಜಮ್ ।
ಭೂಸುರೇಂದ್ರ ಸುವಂದ್ಯ ಚರಣ ಸರೋಜಮ್ ॥ ॥ ೧ ॥

ಅದ್ವೈತ ಮತವಾದಿ ವಾರಣ ಮೃಗೇಂದ್ರಮ್ ।
ಮಧ್ವ ಸಿದ್ಧಾಂತ ಸಂಸ್ಥಾಪಕ ಸುಧೀಂದ್ರಮ್ ।
ಸ ದ್ವೈಷ್ಣವೋತ್ಪಲ ವಿಕಾಸ ಕರ ಚಂದ್ರಮ್ ।
ವಿದ್ವ ದಂಭೋ ಜ ಮಾರ್ತಾಂಡ ಗುಣ ಸಾಂದ್ರಮ್ ॥ ॥ ೨ ॥

ರಾಘವೇಂದ್ರ ಯತೀಂದ್ರ ಕರುಣೈಕ ಪಾತ್ರಮ್ ।
ಭಾಗವತ – ಕವಿಗೀತ ಪಾವನ ಚರಿತ್ರಮ್ ।
ಅಘಹರಣ ಶುಭ ಕರಣ ಸುಕೃತೀಂದ್ರ ಪುತ್ರಮ್ ।
ಭೋಗ ಭಾಗ್ಯದ ಮಾಶು ಪರಮಂ ಪವಿತ್ರಮ್ ॥ ॥ ೩ ॥

ಕಮಲ ಭವ ಸಂಪೂಜ್ಯ ಜಗದಾದಿ ಕಾರಣ ಕ–
ಶ್ರೀ ಮೂಲರಾಮ ಪಾದಾಬ್ಜ ಷಟ್ ಚರಣಮ್ ।
ವಿಮಲ ರಿತ್ತಿ ಕ್ಷೇತ್ರ ವಾಸಿನಂ ಜನಭರಣಮ್ ।
ಅಮಿತ ಸಚ್ಛೀಲ ಗುಣ ಶೋಭಿ ಗುರು ಚರಣಮ್ ॥ ॥ ೪ ॥

–O–

## 27. ಶ್ರೀಮತ್ಸುಶೀಲೇಂದ್ರ ಗುರುಸಾರ್ವಭೌಮ

ರಾಗ – ಷಣ್ಮುಖಪ್ರಿಯ ತಾಳ – ಝಂಪೆ

ಶ್ರೀಮತ್ಸುಶೀಲೇಂದ್ರ ಗುರುಸಾರ್ವಭೌಮ ।
ಭೂಮೀಂದ್ರ ಸಂಪೂಜ್ಯ ಸುಯ ಶೋಭಿರಾಮ ।
ಶ್ರೀ ಮಂತ್ರ ಪುರ ಯತಿಪ ಕರುಣೈಕ ಪಾತ್ರಮ್ ।
ತ್ವಾ ಮಾಽಽಶ್ರಯೇ ಜಗತಿ ಮಹಿತ ಚಾರಿತ್ರಮ್ ॥ ॥ ಅ.ಪ. ॥

ಅಮಿತ ಮತಿ ಮತಜಲಧಿ ರಾಕಾ ಶಶಾಂಕ ಮ್ ।
ಕಮಲ ಭವ ನುತ ಮೂಲ ರಾಮಾರ್ಚಕಮ್ ।
ನಮಿತ ಜನ ಕಾಮ್ಯಾರ್ಥ ಸಂಪೂರಕಮ್ ।
ಕಮಲೇಶ ಪರತತ್ವ ಸಂಬೋಧಕಮ್ ॥ ॥ ಚರಣ ॥

–O–

## ಗ್ರಂಥ ಋಣ


1. ಗುರು ಚರಿತ್ರೆ – ಡಾ। ಹುಲಿ ಕೃ ವೇದವ್ಯಾಸಚಾರ್
2. ಗುರು ಗುಣಸ್ತವನ (ಅನುವಾದ) – ರಾಜಾ ಎಸ್. ಗುರುರಾಜಾಚಾರ್ಯ
3. ಶ್ರೀ ಸುಶೀಲೇಂದ್ರ ಕೀರ್ತಿ ಚಂದ್ರಿಕ (ಸ್ಮರಣ ಸಂಚಿಕೆ – 'ಪರಿಮಳ') – ರಾಜಾ ಎಸ್. ಗುರುರಾಜಾಚಾರ್ಯ
4. ಮನ್ಯು ಸೂಕ್ತಾರ್ಥ – ಶ್ರೀ ಎಸ್. ವಿ. ಭೀಮಭಟ್ಟ.
5. ಶ್ರೀ ಧೀರೇಂದ್ರ ತೀರ್ಥ ಯತೀಂದ್ರಾಷ್ಟಕಮ್ – ಶ್ರೀ ಮಗಡಿ ರಂಗನಾಥಾಚಾರ್ಯ
6. ಶ್ರೀ ಧೀರೇಂದ್ರಾಷ್ಟಕಮ್ – ಶ್ರೀ ರಿತ್ತಿ ವೆಂಕಣ್ಣಾಚಾರ್
7. ಶ್ರೀ ಧೀರೇಂದ್ರ–ಸುಶೀಲೇಂದ್ರತೀರ್ಥ ಸ್ತೋತ್ರ ಪದ ಮಂಜರಿ – ಶ್ರೀ ರಾಜಾ ಎಸ್. ಪವಮಾನಾಚಾರ್
8. ಗುರು ಜಗನ್ನಾಥ ದಾಸರ ಕೃತಿಗಳು – ಕೆ. ಅಪ್ಪಣ್ಣಾಚಾರ್
9. ಶ್ಯಾಮ ಸುಂದರ ಸ್ತೋತ್ರ ಮಾಲ – ಶ್ರೀ ಪುರಂದರ ಜೋಷಿ
10. ಕಡಲ ಬಾಳರಾಯರ ಚರಿತ್ರೆ – ಕಡಲಬಾಳ್ ಪ್ರಲ್ಹಾದಾಚಾರ್ಯ, ಹೊಸಪೇಟೆ
11. ಲಕುಮೀಶದಾಸರ ಕೃತಿಗಳು – ಶ್ರೀಮತಿ ಜಯಲಕ್ಷ್ಮಿ ಮಂಗಳಮೂರ್ತಿ.


* * *

